ಪ್ರಚಾರ ಪುಸ್ತಕ ಮಾಲೆ-೧೭೭

# ದ ಮ್ಮ ಪ ದ

**ಎಚ್. ಗಂಗಾಧರನ್, ಎಂ.ಎ., ಬಿ.ಎಲ್.**



ಪ್ರಸಾರಾಂಗ

ಮೈಸೂರು ವಿಶ್ವವಿದ್ಯಾನಿಲಯ

೧೯೭೧

ಪ್ರಚಾರ ಪುಸ್ತಕ ಮಾಲೆ-೧೭೭

# ದಮ್ಮಪದ

ಎಚ್. ಗಂಗಾಧರನ್, ಎಂ.ಎ., ಬಿ.ಎಲ್.






ಪ್ರಸಾರಾಂಗ

ಮೈಸೂರು ವಿಶ್ವವಿದ್ಯಾನಿಲಯ

೧೯೭೧

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸ್ಲ ಅರೂ, ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲ ದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚ ಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿ ಪ್ರಜೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾ ನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸು ತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸ ಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ

ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯ ಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿನಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾ ಇತರರಿಗೂ ಆನಂದ ವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವ ವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವ ರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನ ವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯ ರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗ ದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿ ಭೇದಭಾವ ಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟು ಮಾಡಿ, ದುಃಖಕ್ಕೆ ಮೂಲಕಾರಣವಾದ ಅಜ್ಞಾನತೆ ಯನ್ನು ಹೋಗಲಾಡಿಸಿ ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪ ದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಪೊತ್ತಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೇ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆ ಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯುಗಳನ್ನು ಕುರಿತು ನೂರಎಪ್ಪತ್ತಾರು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಎಚ್. ಗಂಗಾಧರನ್ ಅವರ "ದಮ್ಮಪದ" ಹೆಚ್ಚು ಜನಪ್ರಿಯವಾಗ ಲೆಂದು ನಾನು ಆಶಿಸುತ್ತೇನೆ.

ಮೈಸೂರು

ದೇ. ಜವರೇಗೌಡ

ಉಪಕುಲಪತಿ

ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯ ಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾ ಇತರರಿಗೂ ಆನಂದ ವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವ ವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವ ರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನ ವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯ ರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗ ದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿ ಭೇದಭಾವ ಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟು ಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆ ಯನ್ನು ಹೋಗಲಾಡಿಸಿ ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪ ದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೇ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆ ಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತು ನೂರಎಪ್ಪತ್ತಾರು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಎಚ್ ಗಂಗಾಧರನ್ ಅವರ "ದಸ್ತಾಪದ" ಹೆಚ್ಚು ಜನಪ್ರಿಯವಾಗ ಲೆಂದು ನಾನು ಆಶಿಸುತ್ತೇನೆ.

ಮೈಸೂರು

ದೇ. ಜವರೇಗೌಡ
ಉಪಕುಲಪತಿ

# ಧಮ್ಮಪದ ಭೂಮಿಕೆ

## ಅಧ್ಯಾಯ ೧

ವಿಶ್ವದ ಮಾನವಕೋಟಿಯು ಯಾವುದಾದರೊಂದು ಧರ್ಮವನ್ನು ಅವಲಂಬಿಸಿರುವುದು ಚರಿತ್ರೆಯಿಂದ ಗೊತ್ತಾಗುತ್ತದೆ. ಧರ್ಮವೆಂಬುದು ಸಮಾಜದಲ್ಲಿ ಬಾಳಬೇಕಾದ ಮಾನವನ ಜೀವನ ಮಾರ್ಗವನ್ನು ನಿಶ್ಚಯಿಸುವ ಒಂದು ಕಟ್ಟಳೆಯೆನ್ನಬಹುದು. ದಾರ್ಶನಿಕರು ಧರ್ಮಕ್ಕೆ ನಾನಾ ಅರ್ಥಗಳನ್ನು ಕೊಡುತ್ತಾರೆ. ಅದು ಅವರವರ ಮಾರ್ಗವನ್ನು ಆಧಾರವಾಗಿಟ್ಟುಕೊಂಡು ಮಾಡಿದ ವ್ಯಾಖ್ಯಾನ ಮಾತ್ರ. ಎಲ್ಲ ಧರ್ಮಾವಲಂಬಿಗಳಿಗೂ ಅನ್ವಯವಾಗುವಂತೆ ಹೇಳುವುದಾದರೆ ಅದು ಜೀವನ ಮಾರ್ಗದ ನಿಯಮಗಳು ಎನ್ನಬಹುದು. ಕೆಲವು ಧರ್ಮಗಳಿಗೆ ಅಗೋಚರವಾದ ಅವ್ಯಕ್ತವಾದ ಪರವಸ್ತು ಪ್ರೇರಕ. ಬಹುಪಾಲು ಧರ್ಮಗಳಿಗೆ ಮಹಾನುಭಾವರಾದ ಮಾನವರೇ ಪ್ರೇರಕರು ಮತ್ತು ಅವರೇ ಸ್ಥಾಪಕರೂ ಆಗಿರುತ್ತಾರೆ.

ಅವ್ಯಕ್ತ ವಸ್ತುವನ್ನೇ ತಮ್ಮ ಧರ್ಮಕ್ಕೆ ಮೂಲ ನಿಧಿಯಾಗಿ ಪಡೆದವರು ಹಿಂದುಗಳು. ಹಿಂದೂಸಮಾಜ ಯಾರೊಬ್ಬ ಮಹಾನುಭಾವರಿಂದಲೇ ನಿರೂಪಿಸಲ್ಪಟ್ಟಿಲ್ಲ. ಇಲ್ಲಿ ಜನಿಸ ಮಹನೀಯರೆಲ್ಲರೂ ಹಿಂದೂ ಧರ್ಮದ

ಪುನರುದ್ಧಾರಕ್ಕೆ ಪ್ರಯತ್ನ ಮಾಡಿ ತಮ್ಮ ಕಾಣಿಕೆ ಯನ್ನು ಸಲ್ಲಿಸಿದ್ದಾರೆ. ಇತರ ಅನೇಕ ಧರ್ಮಗಳು ಮಹಾನುಭಾವರ ನಡೆನುಡಿಯನ್ನು ಅನುಸರಿಸಿ, ಅವ ಲಂಬಿಸಿ ಬೆಳೆದು ಬಂದಿವೆ. ಬೌದ್ಧ ಧರ್ಮ ಬುದ್ಧ ಭಗ ವಾನರನ್ನೂ ಕ್ರೈಸ್ತ ಧರ್ಮ ಏಸುಕ್ರಿಸ್ತನನ್ನೂ ಇಸ್ಲಾಂ ಧರ್ಮ ಮುಹಮ್ಮದ್ ಪೈಗಂಬರನನ್ನೂ ಆಯಾ ಧರ್ಮ ಗಳ ಪ್ರವರ್ತಕರಾಗಿ ಪರಿಗಣಿಸಿವೆ. ಹೀಗೆ ಧರ್ಮದ ಬೆಳ ವಣಿಗೆಯಲ್ಲಿ ಎರಡು ಮೂಲ ಪ್ರಭೇಧಗಳನ್ನು ಕಾಣ ಬಹುದು. ಅವ್ಯಕ್ತ ಶಕ್ತಿಯನ್ನು ಹಿನ್ನೆಲೆಯಾಗಿ ಪಡೆದಿ ರುವ ಹಿಂದೂಗಳು ತಮ್ಮ ಧರ್ಮವನ್ನು ಬೆಳೆಸುವಾಗ ಅಗೋಚರ ವಸ್ತುವಿಗೂ ಗೋಚರವಾದ ಸೃಷ್ಟಿಗೂ ನೇರ ವಾದ ಸಂಬಂಧವನ್ನು ಕಲ್ಪಿಸಿಕೊಂಡೇ ಬಂದಿದ್ದಾರೆ. ಮಾನವ ತನ್ನ ಜೀವನದ ಮಾರ್ಗದಲ್ಲಿ ಬರುವ ಕಷ್ಟ ಕಾರ್ಪಣ್ಯಗಳನ್ನೆಲ್ಲಾ ತನ್ನ ಪ್ರಯತ್ನದಿಂದಲೇ ಪರಿಹರಿಸಿ ಕೊಳ್ಳಲು ಯತ್ನಿಸಿದ್ದಾನೆ. ತನ್ನ ಶಕ್ತಿ ಮೀರಿದಾಗ ಅಗೋಚರವಾದ ಮತ್ತೊಂದು ಶಕ್ತಿಗೆ ಶರಣಾಗತನಾಗಿ ದ್ದಾನೆ. ಆ ಶಕ್ತಿಯನ್ನೇ ವಿವಿಧ ಧರ್ಮಗಳು ವಿವಿಧ ನಾಮರೂಪಗಳಿಂದ ಚಿತ್ರಿಸಿವೆ. ಅಂತಹ ನಂಬಿಗೆಯೊಂದು ಮಾನವತೆಯಲ್ಲಿ ಉಳಿದು ಬಂದಿರುವುದರಿಂದ ಸಮಾಜದ ದಾರಿ ಎಷ್ಟೋ ಸುಗಮವಾಗಿದೆ. ವಿಜ್ಞಾನ ಯುಗದಲ್ಲಿ ಜೀವಿಸುವ ವಿಜ್ಞಾನಮಾನವನೂ ಸಹ ತನ್ನ ಸರ್ವ ಶಕ್ತಿಗೂ ಮೀರಿದ ಶಕ್ತಿಯೊಂದಿವೆ ಎಂದು ನಿಶ್ಚಯಿಸಿ

ನ್ನಾನೆ. ಆ ಶಕ್ತಿಯೇ ನಮ್ಮನ್ನು ನಡೆಸುತ್ತಿರುವುದೆಂಬ ನಿಶ್ಚಯಕ್ಕೆ ಬಂದು ಅದನ್ನು ಅನುಸರಿಸಿಯೇ ನಡೆಯುತ್ತಿರುವುದು ಮಾನವನ ಸಹಜ ಪ್ರವೃತ್ತಿಯಾಗಿದೆ. ಈ ಅವಲಂಬನೆಯ ಹಿನ್ನೆಲೆಯೇ ಧರ್ಮ. ಅಂತಹ ಶಕ್ತಿಯು ಜೀವಂತ ವ್ಯಕ್ತಿಗಳಲ್ಲೂ ಸಹ ಆಗಾಗ ವ್ಯಕ್ತವಾಗಿ ಜನತೆ ಅವರ ನಡೆನುಡಿಗೆ ಮನವೊಲಿದು ಅವರು ತೋರಿದ ಮಾರ್ಗದಲ್ಲಿ ನಡೆದು ಧನ್ಯರಾಗಿದ್ದಾರೆ. ಇಹ ಮತ್ತು ಪರಗಳಲ್ಲಿ ಸುಖವನ್ನು ಅನುಭವಿಸಿದ್ದಾರೆ.

ಹೀಗೆ ದಾರಿತೋರಿದ ಮಹಾನುಭಾವರ ನುಡಿ ನಿತ್ಯನೂತನವಾಗಿ ಸತ್ಯಸಂಪತ್ತಾಗಿ ಪ್ರಪಂಚದಲ್ಲಿ ಬೆಳೆದು ಬೆಳಗುತ್ತಾ ಬಂದಿದೆ. ಅನೇಕ ಋಷಿಮುನಿಗಳು ಕಂಡ ಸತ್ಯದ ಅನುಭವವೇ ನಮ್ಮಲ್ಲಿ ಉಳಿದು ಬಂದಿರುವ ವೇದೋಪನಿಷತ್ತುಗಳು. ವೇದಗಳು ಅಪೌರುಷೇಯವೆಂಬುದು ಹಿಂದೂಗಳ ನಂಬಿಗೆ. ಅವು ಮನುಷ್ಯ ವಾಣಿಯಲ್ಲ ದೈವವಾಣಿ ಎನ್ನುತ್ತಾರೆ. ಅಂದರೆ ದೇವರು ಎಂಬ ಅಗೋಚರ ಶಕ್ತಿ ಮನುಷ್ಯನಂತೆ ಈ ಲೋಕಕ್ಕೆ ಬಂದು ಈ ಸಂದೇಶವನ್ನು ನೀಡಿದನು ಎನ್ನುತ್ತಾರೆ. ಆದರೆ ವೈಚಾರಿಕ ದೃಷ್ಟಿಯುಳ್ಳ ಈ ಯುಗದಲ್ಲಿ ಅಂಧಶ್ರದ್ಧೆಗೆ ಅಂಧನಂಬಿಗೆಗೆ ಅವಕಾಶವಿಲ್ಲ. ವಿಚಾರವಂತರು ಇವುಗಳನ್ನು ಅನುಭವಿಗಳಾದ ಮಹಾನುಭಾವರ ಸಂದೇಶವೆಂದೂ ಅವುಗಳ ಸಂಗ್ರಹವೇ ವೇದವೆಂದೂ ಒಪ್ಪಿದ್ದಾರೆ. ಸುಪ್ರಸಿದ್ಧ ವಿದ್ವಾಂಸರೂ ಭಾರತದ ಹಿಂದಿನ ರಾಷ್ಟ್ರಪತಿ

ಗಳೂ ಇದ ಭಾರತರತ್ನ ಡಾ|| ರಾಧಾಕೃಷ್ಣರವರು ನಿಷ್ಪಕ್ಷಪಾತವಾದ ಅಭಿಪ್ರಾಯವನ್ನು ಈ ವಿಷಯದಲ್ಲಿ ನೀಡಿದ್ದಾರೆ. ಅವು ಆರ್ಯರು ತಮ್ಮ ದೇಶದಿಂದ ಭಾರತಕ್ಕೆ ತಂದ ಅಮೂಲ್ಯ ಕಾಣಿಕೆ. ಇಲ್ಲಿನ ಪರಿಸ್ಥಿತಿಗೆ ತಾವೂ ಹೊಂದಿಕೊಂಡು ತಮ್ಮ ಮೇಲ್ಮೆಯಿಂದ ಇಲ್ಲಿನ ಜನರಲ್ಲಿ ಸೌಹಾರ್ದವನ್ನೂ ಬೆಳೆಸುವುದಕ್ಕೆ ಸಾಧನವಾದ ಅಮೂಲ್ಯ ಸಂಪತ್ತನ್ನು ಅವರು ರಕ್ಷಿಸಿಕೊಂಡಿದ್ದಾರೆಂದು ಅಭಿಪ್ರಾಯಪಡುತ್ತಾರೆ. 1) ಭಾರತಕ್ಕೆ ಆರ್ಯರ ಅಮೂಲ್ಯ ಕೊಡುಗೆಯೇ ವೇದ ಸಾಹಿತ್ಯಸಂಪತ್ತು. ವೇದದಲ್ಲಿ ಪ್ರಧಾನವಾಗಿ ಮಂತ್ರಭಾಗ ಬ್ರಾಹ್ಮಣಗಳು ಮತ್ತು ಉಪನಿಷತ್ತುಗಳೆಂದು ಮೂರು ಭಾಗಗಳುಂಟು. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದ ಎಂದು ನಾಲ್ಕು ವೇದಗಳು ಜಗತ್ಪ್ರಸಿದ್ಧವಾಗಿವೆ. ಪ್ರತಿಯೊಂದು ವೇದದಲ್ಲಿಯೂ ಮೇಲೆ ಹೇಳಿದಂತೆ ಮೂರು ಭಾಗಗಳುಂಟು. ಮಂತ್ರಗಳ ಸಮೂಹಕ್ಕೆ ಸಂಹಿತೆಗಳೆಂದೂ ಕರೆಯುತ್ತಾರೆ. ಮಂತ್ರಗಳು ಯಾಗವನು ನಡೆಸುವ ಪ್ರಾರ್ಥನೆಗಳಾಗಿವೆ. ಬ್ರಾಹ್ಮಣಗಳಲ್ಲಿ ಸಾಮಾಜಿಕ ಆಚರಣೆಗಳನ್ನು ವಿವರಿಸಿದೆ. ಉಪನಿಷತ್ತುಗಳಲ್ಲಿ ದರ್ಶನ ವಿಷಯಗಳ ವಿಪುಲವಾದ ಚರ್ಚೆಗಳೂ ನಿರ್ಧಾರಗಳೂ ಕಂಡುಬರುತ್ತವೆ.

ವೇದಗಳಲ್ಲಿರುವ ಮಂತ್ರಭಾಗವೂ ಸಹ ಬಹು ದೊಡ್ಡ ಸಾಹಿತ್ಯರಾಶಿ. ಋಗ್ವೇದದಲ್ಲಿ 10552 ಮಂತ್ರ

ಗಳೂ, ಸಾಮವೇದದಲ್ಲಿ 1875 ಮಂತ್ರಗಳೂ ಯಜುರ್ವೇದದಲ್ಲಿ 2086 ಮಂತ್ರಗಳೂ ಅಥರ್ವವೇದದಲ್ಲಿ 5987 ಮಂತ್ರಗಳೂ ಅಂದರೆ ಒಟ್ಟು 20500 ಮಂತ್ರಗಳಿವೆ. ವಿದ್ವಾಂಸರು ವೇದಗಳ ಯುಗವನ್ನು ಕ್ರಿ.ಪೂ. 1500 ಇರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ ವೇದಗಳ ಅಂತ್ಯ ಭಾಗಗಳಾದ ಉಪನಿಷತ್ತುಗಳೂ ಸಹ ಅಷ್ಟೇ ಪ್ರಾಚೀನವಾದವುಗಳು. ಡಾ|| ರಾಧಾಕೃಷ್ಣರವರು ಪ್ರಾಚೀನ ಉಪನಿಷತ್ತುಗಳು ಕ್ರಿ.ಪೂ. 1000 ದಿಂದ ಕ್ರಿ.ಪೂ. 300 ವರ್ಷದಷ್ಟು ಪ್ರಾಚೀನವೆಂದು ಹೇಳುತ್ತಾರೆ. ಉಪನಿಷತ್ತುಗಳ ಸಂಖ್ಯೆ ಸಾಮಾನ್ಯವಾಗಿ 108 ಎಂದು ಪರಿಗಣಿಸಲಾಗಿದೆ. ಆದರೆ ಅವೆಲ್ಲವೂ ಅಷ್ಟೇ ಪ್ರಾಚೀನವಾದವುಗಳಲ್ಲ. ಬೌದ್ಧಯುಗದಿಂದ ಇತ್ತೀಚೆಗೆ ರೂಪಗೊಂಡ ಉಪನಿಷತ್ತುಗಳೂ ಕೆಲವಿವೆ. ಶಂಕರಾಚಾರ್ಯರು ವ್ಯಾಖ್ಯಾನಮಾಡಿರುವ. ಈಶ. ಕೇನ

The Inspired Songs which the Aryans brought with them from their earlier home into India as their most precious possession were collected, it is generally held, in response to a prompting to treasure them up which arose when the Aryans met with large numbers of the worshippers of other gods in their new country, The Rg-veda is that collection, The Sama-veda is a purely liturgical collection.

(Indian philosophy vol. I. P. 64)

ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತರೀಯ, ಐತರೇಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ ಉಪನಿಷತ್ತುಗಳು ಎಲ್ಲಕ್ಕಿಂತಲೂ ಪ್ರಾಚೀನವೆಂದು ಮತ್ತು ಉಪನಿಷತ್ತುಗಳಲ್ಲೆಲ್ಲಾ ಮುಖ್ಯವಾದುವೆಂದೂ ಮನ್ನಣೆಪಡೆದಿವೆ. ವೇದ ಮತ್ತು ಅವುಗಳ ಅಂಗವಾದ ಉಪನಿಷತ್ತುಗಳು ಬಹುಕಾಲದಿಂದ ಭಾರತೀಯ ಜನ ಜೀವನದ ಮತ್ತು ಜ್ಞಾನವತ್ತ್ವದ ಸಾಧನೆಯ ಸಂವಿಧಾನ ದಂತೆ ಹಾಸುಹೊಕ್ಕಾಗಿ ಬೆಳೆದುಬಂದಿವೆ. ಜನರು ಯಾವ ಸಮಯದಲ್ಲೂ ಯಾವ ವಿಷಯದಲ್ಲೂ ವೇದ ವಿರೋಧ ವಾಗಿ ಮತ್ತು ಉಪನಿಷತ್ತಿಗೆ ಪ್ರತಿಯಾಗಿ ನುಡಿಯುವ ಅಥವಾ ನಡೆಯುವ ಪ್ರವೃತ್ತಿಯನ್ನು ಹೊಂದಿರಲಿಲ್ಲ ಆದುದರಿಂದ ಅವುಗಳ ಹಿರಿಮೆ ಎಷ್ಟೆಂಬುದನ್ನು ನಾವು ಗಮನಿಸಬಹುದು. ಇವುಗಳು ಇಷ್ಟು ಜನಪ್ರಿಯವಾಗಿ ದ್ದರೂ ಅವುಗಳ ತಾತ್ವಿಕ ಸಂಗತಿಗಳು ಸಾಮಾನ್ಯ ಜನ ರಿಗೆ ಅರ್ಥವಾಗುವುದು ಕಷ್ಟತರವಾಗಿತ್ತು. ಆದುದರಿಂದ ಜನರಲ್ಲಿ ತಾತ್ವಿಕ ಭಾವನೆಯನ್ನು ಪ್ರಚೋದಿಸಲು ಪುರಾಣಸಾಹಿತ್ಯ ರಚನೆಯಾಯಿತು. ಭಾರತೀಯ ಸಂಸ್ಕೃತಿಯ ಸಂವರ್ಧಕರಾದ ವ್ಯಾಸ ವಾಲ್ಮೀಕಿ ಮಹಾ ನುಭಾವರು ಕೊಟ್ಟ ಕೊಡುಗೆ ವಿಶ್ವಮಾನ್ಯವಾಗಿದೆ. ವಾಲ್ಮೀಕಿಯಿಂದ ರಚಿತವಾದ ರಾಮಾಯಣ ವ್ಯಾಸರಿಂದ ರಚಿತವಾದ ಮಹಾಭಾರತ ಇಂದಿಗೂ ಜಗದ್ವಿಖ್ಯಾತ ಕೃತಿಗಳೆನಿಸಿವೆ. ಇಲ್ಲಿ ಮಾನವ ಸಮಾಜದ ಕಷ್ಟ ಸುಖ

ಗಳು, ಭಕ್ತಿ, ಜ್ಞಾನ, ವೈರಾಗ್ಯಗಳ ರೂಪುರೇಖೆಗಳು
ಸ್ಪಷ್ಟವಾಗಿ ಮಾನವರಲ್ಲಿ ಆಕಾಂಕ್ಷಾಭಾವನೆಯನ್ನೂ, ಸದ್ವ
ರ್ತನೆಯನ್ನೂ ರೂಪಿಸುವ ರನ್ನಗನ್ನಡಿಗಳಾಗಿವೆ. ಈ
ಕೃತಿಗಳು ಸ್ವತಂತ್ರವಾಗಿ ಕಂಡುಬಂದರೂ ಇಲ್ಲಿ
ವೇದೋಪನಿಷತ್ತುಗಳ ಸಂದೇಶವನ್ನು ಧಾರಾಳವಾಗಿ
ಬಳಸಿರುವುದು ಕಂಡುಬರುತ್ತದೆ. ತತ್ವಗಳನ್ನು
ಜೀವಂತಗೊಳಿಸಿದ ಮಹಾಕಾವ್ಯಗಳೇ ರಾಮಾಯಣ
ಮತ್ತು ಮಹಾಭಾರತವೆನ್ನಬಹುದು. ಅಂದಿನ ಜನ
ತೆಯ ಮನೋಪ್ರವೃತ್ತಿಗೂ ಅಭಿರುಚಿಗೂ ಅನುಗುಣ
ವಾಗಿ ಪ್ರಸಂಗಗಳನ್ನು ಹೆಣೆದು ಜನರಿಗೆ ಮಾರ್ಗದರ್ಶನ
ಮಾಡಿಸುವ ನಿರಂತರ ಯತ್ನ ಇಲ್ಲಿ ನಡೆದಿದೆ. ವೇದಗಳ
ನ್ನೆಲ್ಲಾ ಕಲಿತು ಅರಿತು ಅರ್ಥಮಾಡಿಕೊಳ್ಳುವ ಸಾಮ
ರ್ಥ್ಯವೂ ಅವಕಾಶವೂ ಇಲ್ಲದವರಿಗೆ ಮತ್ತು ಗಹನವಾದ
ತಾತ್ವಿಕ ವಿವೇಚನೆಯಲ್ಲಿ ನಿರತರಾಗಲು ಮನ ಬಗ್ಗದವ
ರಿಗೆ ಮೂಲ ಸಂದೇಶಗಳೆಲ್ಲಾ ರಮ್ಯ ವಾತಾವರಣದ
ಲ್ಲಿಯೇ ದೊರೆಯುವಂತೆ ಈ ಪುರಾಣಗಳು ರಚನೆಯಾ
ಗಿವೆ. ಇದೇ ಮನೋಧರ್ಮವನ್ನು ಅವಲಂಬಿಸಿ ಅಷ್ಟಾ
ದಶಪುರಾಣಗಳೂ, ಭಾಗವತಾದಿ ಕೃತಿಗಳೂ ರಚನೆಯಾ
ಗಿವೆ. ಇವೆಲ್ಲದರ ಉದ್ದೇಶ ಜನರ ಮನಸ್ಸಿನ ಮೇಲೆ
ತಾತ್ವಿಕವಾದ ಸತ್ಪರಿಣಾಮವನ್ನುಂಟುಮಾಡುವುದೇ
ಆಗಿದೆ. ಪುರಾಣಗಳ ಸಂದೇಶಗಳು ಸನ್ನಿವೇಶಗಳು
ವೇದೋಪನಿಷತ್ತಿನ ತತ್ವಗಳನ್ನು ಅಪ್ಪಿಕೊಂಡಿವೆ

ಯೆಂಬುದು ಸರ್ವವಿದಿತವಾಗಿದೆ.

ಇಂತಹ ಕೃತಿಗಳಲ್ಲಿ ಮಹಾಭಾರತ ಅಗ್ರಸ್ಥಾನವನ್ನು ಲೋಕಮಾನ್ಯತೆಯನ್ನೂ ಪಡೆದಿದೆ. ಇದಕ್ಕೆ ಕಾರಣ ಅಲ್ಲಿರುವ ಕಥಾನಿರೂಪಣೆಯಲ್ಲ. ಕಥೆಯ ನೆಪದಲ್ಲಿ ಚಿತ್ರಿಸಿರುವ ಗೀತಾ ಸಂದೇಶ. ಕೌರವ ಪಾಂಡವರು ಹದಿನೆಂಟು ಅಕ್ಷೋಹಿಣೀ ಸೈನ್ಯದಿಂದ ಸಜ್ಜಾಗಿ ಕುರುಕ್ಷೇತ್ರದ ರಣಭೂಮಿಯಲ್ಲಿ ಹೋರಾಟಕ್ಕೆ ಸಿದ್ಧವಾಗಿರುವಾಗ ಪಾಂಡವ ಕುಲಾಗ್ರಣಿ ಅರ್ಜುನನು ವಿಷಾದದಿಂದ ಧನುಸ್ಸನ್ನು ಬಿಸುಟು ಯುದ್ಧದಿಂದ ವಿಮುಖನಾಗುತ್ತಾನೆ. ಆವನ ಸಾರಥಿಯಾದ ಕೃಷ್ಣಪರಮಾತ್ಮನು ಅರ್ಜುನನಿಗೆ ವಿವೇಕವನ್ನು ಹೇಳುತ್ತಾ ವಿಶ್ವವ್ಯಾಪಕವಾದ ಸಂದೇಶವನ್ನು ಜಗತ್ತಿಗೆ ನೀಡಿದ್ದಾನೆ. ಈ ಭಾಗವು ಭಗವದ್ಗೀತೆಯೆಂದು ವಿಖ್ಯಾತವಾಗಿದೆ. ಇದನ್ನು ಉಪನಿಷತ್ತಿನ ಸಾರಸರ್ವಸ್ವವೆಂದು ಜಗತ್ತು ಮಾನ್ಯ ಮಾಡಿದೆ. ಹದಿನೆಂಟು ಅಧ್ಯಾಯಗಳುಳ್ಳ ಈ ಭಾಗದಲ್ಲಿ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲೂ "ಭಗವದ್ಗೀತೆ ಮತ್ತು ಉಪನಿಷತ್ತಿನಲ್ಲಿ" ಎಂದೇ ಮುಕ್ತಾಯಮಾಡಿದೆ. ಅಂದರೆ ಉಪನಿಷತ್ತಿನ ವಿಷಯವನ್ನೇ ಇಲ್ಲಿ ಸಾರಸಂಗ್ರಹವಾಗಿ ಹೇಳಿದೆಯೆಂಬುದು ಗೊತ್ತಾಗುತ್ತದೆ.

"ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ।
ಪಾರ್ಥೋವತ್ಸಃ ಸುಧೀರ್ಭೋಕ್ತಾ ದುಗ್ಧಂಗೀತಾಮೃತಂ
ಮಹತ್"

ಎಂದು ಗೀತಾಮಹತ್ತ್ವವನ್ನು ಹೇಳುತ್ತಾ ಗೀತೆಯು ಸರ್ವ ಉಪನಿಷತ್ತುಗಳ ಸಾರವೆಂಬುದನ್ನು ಪಂಡಿತರು ಖಚಿತಪಡಿಸಿದ್ದಾರೆ. ಹೀಗೆ ವಿಪುಲವಾದ ತತ್ತ್ವಸಾಗರ ದಿಂದ ದರ್ಶನ ನವನೀತವನ್ನು ಪಡೆದು ಜಗತ್ತಿಗೆ ನೀಡಿದ ಅಂದಿನ ಕಾರ್ಯ ಮಹತ್ತರವಾದುದು. ಇಂತಹ ಕಾರ್ಯ ಜಗತ್ತಿನ ಎಲ್ಲ ದರ್ಶನ ಸಾಹಿತ್ಯದಲ್ಲೂ ಕಾಣುಬರುತ್ತದೆ.

ಭಾರತದ ಸಾಂಸ್ಕೃತಿಕ ಇತಿಹಾಸದ ಮೊದಲಲ್ಲಿ ಜನರು ಆಂತರಿಕ ವಿಕಾಸಕ್ಕೆ ಆತ್ಮ ಸಾಕ್ಷಾತ್ಕಾರಕ್ಕೆ ಹೆಚ್ಚು ಮಹತ್ತ್ವವನ್ನು ಕೊಟ್ಟರು. ಜನರ ನೀತಿ ನಿಯಮ ಗಳನ್ನು ನಿರ್ದೇಶಿಸುವುದಕ್ಕಾಗಿಯೇ ವೇದಾದಿ ಉಪನಿ ಷತ್ ಸಾಹಿತ್ಯ ಬೆಳೆಯಿತು. ಇವು ಬುದ್ಧಿಯ ಶುದ್ಧೀ ಕರಣಕ್ಕೆ ಮಾನಸಿಕ ಪರಿವರ್ತನೆಗೆ ಸಹಾಯಕವಾದುವು. ಆದರೆ ಮಾನವನ ಆಚಾರ ವಿಚಾರಗಳಿಗೆ ಮಾರ್ಗದರ್ಶನ ಮಾಡಿಸಲು ಸ್ಮೃತಿಗಳೆಂಬ ಸಾಹಿತ್ಯರಾಶಿ ಬೆಳೆಯಿತು. ಧರ್ಮದ ಆಚರಣೆಯನ್ನು ನಿರ್ದೇಶಿಸುವುದೇ ಈ ಕೃತಿ ಗಳ ಮೂಲ ಉದ್ದೇಶವಾಯಿತು. ಈ ಸ್ಮೃತಿಗಳ ಸಂಖ್ಯೆ ಅಲ್ಪವೇನಲ್ಲ. ಬೋಧಾಯನನು ತನ್ನನ್ನೂ ಸೇರಿಸಿ ಕೊಂಡು ಔಪಜಂಘನಿ, ಕಾತ್ಯ, ಕಾಶ್ಯಪ, ಗೌತಮ, ಪ್ರಜಾಪತಿ, ಮೌದ್ಗಲ್ಯ ಮತ್ತು ಹಾರೀತ ಎಂದು ಎಂಟು ಜನ ಸ್ಮೃತಿಕಾರರನ್ನು ಸೂಚಿಸುತ್ತಾನೆ. ವಶಿಷ್ಠನು, ಯಮ ಮತ್ತು ಮನು ಇವರನ್ನೂ, ಆಪಸ್ತಂಭನು ಏಕ,

ಕಾಣಿಕ. ಪುಷ್ಕರಸ ಇವರನ್ನೂ ಮನುವು. ಅತ್ರಿ, ಭೃಗು. ವಶಿಷ್ಠ, ವೈಖಾನಸ, ಶೌನಕ ಇವರನ್ನೂ, ನೀಲಕಂಠ ಶಿವಾಚಾರ್ಯರು ಇವರುಗಳ ಜೊತೆಗೆ, ಬೃಹಸ್ಪತಿ. ದಕ್ಷ ಅಂಗೀರಸ. ಯೋಗೀಶ್ವರ, ಪ್ರಚೇತಾ ಶಾತಾತಪ, ಪರಾಶರ, ಸಂವರ್ತ. ಉಶಸನ, ಶಂಬ, ಲಿಖಿತ. ವಿಷ್ಣು. ಆಪಸ್ಥಂಭ ಇವರನ್ನೂ ಸ್ಮೃತಿಕಾರರೆಂದು ಹೇಳುತ್ತಾರೆ. ಹೀಗೆ ನೂರಾರು ಜನ ಸ್ಮೃತಿಗಳನ್ನು ರಚಿಸಿದ್ದಾರೆ.

ಈ ಸ್ಮೃತಿಗಳ ಉದಯದ ಕಾಲದಲ್ಲೇ ಮಾನವತೆಯ ಮಾರ್ಗದರ್ಶನಕ್ಕಾಗಿ ಮತ್ತೊಂದು ಸಾಹಿತ್ಯರಾಶಿ ಸಂಸ್ಕೃತ ಭಾಷೆಯಲ್ಲಿ ಬೆಳೆಯಿತು. ಅದಕ್ಕೆ ಆಗಮ ಅಥವಾ ತಂತ್ರಶಾಸ್ತ್ರವೆಂದು ಹೆಸರು. ಅವು ಸಾರ್ವಜನಿಕವಾದುದರಿಂದ ವೇದೋಪನಿಷತ್ತುಗಳಷ್ಟೇ ಪ್ರಾಧಾನ್ಯತೆಯನ್ನು ಪಡೆದಿವೆಯೆನ್ನಬಹುದು. ಮನುಸ್ಮೃತಿಯ ವ್ಯಾಖ್ಯಾನಕಾರನಾದ ಕಲ್ಲೂಕಭಟ್ಟನು "ವೈದಿಕೀತಾಂತ್ರಿಕೀ ಚೈವ ದ್ವಿವಿಧಂ ಶ್ರುತಿಕೀರ್ತಿತ:" ಎಂದು ಹೇಳಿರುವುದು ತಂತ್ರಗಳ ಪ್ರಭಾವವನ್ನು ವ್ಯಕ್ತಪಡಿಸುತ್ತದೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಆಗಮಗಳ ದರ್ಶನವನ್ನು ಜನರು ಒಪ್ಪಿರುವುದು ಇತಿಹಾಸದಿಂದ ಕಂಡುಬರುತ್ತದೆ.

ಶಾರದಾತಿಲಕವೆಂಬ ತಂತ್ರಶಾಸ್ತ್ರ ಗ್ರಂಥದಲ್ಲಿ

ಆಗತಂ ಶಿವವಕ್ತ್ರಾಬ್ಯಾದ್ಗತಂತು ಗಿರಿಜಾಶ್ರುತಾ।
ಮತಾಗಮ ಇತಿಪ್ರೋಕ್ತ ಶಾಸ್ತ್ರಂ ಪರಮಪಾವನಂ॥

ಎಂಬಿವೆ. ಅಂದರೆ ಕಲಿಯುಗದಲ್ಲಿ ಶ್ರುತಿಗಳ ಲಾಲನೆ ಪಾಲನೆಯಲ್ಲಿ ಜನರು ನಿರಾಸಕ್ತರಾಗಿ ಅವು ಶಕ್ತಿಹೀನವಾದಾಗ ಜನರ ಉದ್ಧಾರಕ್ಕಾಗಿ ಶಿವನು ತನ್ನ ಪತ್ನಿಯಾದ ಗಿರಿಜಾದೇವಿಗೆ ಬೋಧಿಸಿದ ಶಾಸ್ತ್ರರಾಶಿಯೇ ಆಗಮವೆಂದು ಖ್ಯಾತಿಹೊಂದಿದೆ ಶಾಸ್ತ್ರಕಾರರು "ಆಸಮಂತಾತ್ ಗಮಯತೀತ್ಯಾಗಮಃ" ಎಂದು ಶಬ್ದಾರ್ಥವಿವರಣೆ ನೀಡುತ್ತಾರೆ. ಆದುದರಿಂದ ಆಗಮಗಳಲ್ಲಿ ಮಾನವನ ಚಿತ್ತಶುದ್ಧಿಗೆ ಸಾಧಕವಾದ ದರ್ಶನ ಧರ್ಮಗಳ ಜೊತೆಗೆ ಬಾಹ್ಯ ಬದುಕಿಗೆ ಚೇತನಕಾರಿಯಾದ, ಶಿಲ್ಪ, ಚಿತ್ರ, ಸಂಗೀತ, ವೈದ್ಯ ಮುಂತಾದವುಗಳನ್ನೂ ವೈಜ್ಞಾನಿಕ ವಿವರಣೆಗಳನ್ನೂ ಪಡೆಯಬಹುದಾಗಿದೆ. ಆದ್ದರಿಂದಲೇ ಅವು ಅಂದು ಬಹುಜನಪ್ರಿಯವಾಗಿದ್ದುವು. ಮಹಾಭಾರತಕ್ಕಿಂತ ಮುಂಚೆಯೇ ಆಗಮಗಳು ಪ್ರಚಲಿತವಿದ್ದುವು. ದ್ರೋಣಾಚಾರ್ಯರ ಯೋಧವಿದ್ಯಾ ನೈಪುಣ್ಯತೆಗೆ ಅವರಿಗಿದ್ದ ಆಗಮಶಾಸ್ತ್ರಪಾಂಡಿತ್ಯವೇ ಕಾರಣವೆನ್ನಬಹುದು. ಅಲ್ಲದೆ ಭಗವದ್ಗೀತೆಯಲ್ಲಿ ಅನೇಕ ಶ್ಲೋಕಗಳು ಆಗಮಗಳಿಂದಲೇ ಆಯ್ದುಕೊಂಡಿರುವ ನಿದರ್ಶನಗಳೂ ಇವೆ. ಆದುದರಿಂದ ಅವುಗಳ ಮಹತ್ವವನ್ನು ಹೆಚ್ಚು ಚರ್ಚಿಸುವ ಅಗತ್ಯವಿಲ್ಲ.

ಆಗಮಗಳನ್ನು ಸಾಮಾನ್ಯವಾಗಿ ಶೈವ, ವೈಖಾನಸ, ಪಾಂಚರಾತ್ರಗಳೆಂದು ಮೂರುಭಾಗ ಮಾಡುವುದುಂಟು.

ಆದರೆ ಶಾಕ್ತದರ್ಶನಕ್ಕೆ ಆಗಮಗಳೇ ಆಧಾರ. ಅವುಗಳಿಗೆ ಶಾಕ್ತತಂತ್ರಗಳೆಂದೇ ಕರೆಯುತ್ತಾರೆ. ಅಂತೆಯೇ ನೂರಾರು ಬೌದ್ಧತಂತ್ರಗಳೂ ಇವೆ. ಇವುಗಳಲ್ಲಿ ಶೈವಾಗಮಗಳ ಬಾಹುಳ್ಯವೇ ಹೆಚ್ಚು. ಸೂತಸಂಹಿತೆಯಲ್ಲಿ

ಕಾಮಿಕಾದಿ ಪ್ರಭೇದೇನ ಶಿಷ್ಯೇಭ್ಯಃ ಸಂಪ್ರಕಾಶಿತಃ ।
ಅಷ್ಟಾವಿಂಶತಿ ಸಂಖ್ಯಾಕಾಸ್ತೇ ಸಿದ್ಧಾಂತ ಇತಿ ಸಂಜ್ಞಿತಾಃ ॥

ಎಂದು ಇಪ್ಪತ್ತೆಂಟು ಶಿವಾಗಮಗಳು ಇರುವುದಾಗಿ ತಿಳಿಸಿದೆ. ಶೈವದರ್ಶನಗಳೆಲ್ಲವೂ ಈ ಇಪ್ಪತ್ತೆಂಟು ಶಿವಾಗಮಗಳನ್ನು ಮಾನ್ಯ ಮಾಡಿಕೊಂಡಿವೆ. ಕಾಮಿಕ, ಯೋಗಜ, ಅಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಾಹಸ್ರ, ಅಂಶುಮಾನ್, ಸುಪ್ರಭೇದ, ವಿಜಯ, ನಿಶ್ವಾಸ, ಸ್ವಾಯಂಭುವ, ಅನಲ, ವೀರ, ರೌರವ, ಮಕುಟ, ವಿಮಲ, ಚಂದ್ರಜ್ಞಾನ, ಬಿಂಬ, ಪ್ರೋದ್ಗೀತ, ಲಲಿತ, ಸಿದ್ಧ, ಸಂತಾನ, ಶರ್ವ, ಪಾರಮೇಶ್ವರ, ಕಿರಣ, ವಾತುಲಗಳೆಂಬ ಇಪ್ಪತ್ತೆಂಟು ಮೂಲ ಆಗಮಗಳ ಜೊತೆಗೆ ಇನ್ನೂರೆಂಟು ಉಪಾಗಮಗಳು ಇರುವುದಾಗಿ ತಿಳಿಯಬರುತ್ತದೆ. ಈ ಸಾಹಿತ್ಯರಾಶಿ ಅಪಾರವಾದುದು. ಅಪ್ಪಯ್ಯದೀಕ್ಷಿತರು ಈ ಆಗಮಗಳ ಶ್ಲೋಕ ಸಂಖ್ಯೆಯನ್ನು ಸೂಚಿಸಿದ್ದಾರೆ. ಅದರಿಂದ ಈ ಸಾಹಿತ್ಯರಾಶಿಯ ವಿಪುಲತೆಯನ್ನು ನಾವು ಕಾಣಬಹುದು.

ವೇದೋಪನಿಷತ್ತುಗಳ ಸಾರವನ್ನು ಸಂಗ್ರಹಿಸಿ ಗೀತೆ ಯನ್ನು ಸೃಜಿಸಿದಂತೆ ಆಗಮಗಳ ಸಾರವನ್ನು ಸಂಗ್ರಹಿಸಿ ಗ್ರಂಥವನ್ನು ಹೆಣೆಯುಲು ಪ್ರಯತ್ನಗಳು ನಡೆದಿವೆ. ಅಂತಹ ಕೃತಿಗಳಲ್ಲಿ 'ಸಿದ್ಧಾಂತ ಶಿಖಾಮಣಿ' ಗ್ರಂಥವು ಪ್ರಧಾನವಾದುದು. ಇದು ಅಗಸ್ತ್ಯರಿಗೆ ಶ್ರೀ ರೇಣುಕಾಚಾರ್ಯರು ಬೋಧಿಸಿದ ಗೀತೆಯೆಂದು ಪ್ರಖ್ಯಾತವಾಗಿದೆ. ಕೃತಿಯನ್ನು ರಚಿಸಿದ ಶಿವಯೋಗಿ ಶಿವಾಚಾರ್ಯರು ತಮ್ಮ ಸಿದ್ಧಾಂತ ಶಿಖಾಮಣಿಯಲ್ಲಿ

ಆಲೋಕ್ಯ ಶೈವತಂತ್ರಾಣಿಕಾಮಿಕಾದ್ಯಾನಿ ಸಾದರಂ।
ವಾತುಳಾಂತಾನಿ ಶೈವಾನಿ ಪುರಾಣಾನ್ಯ ಖಿಲಾನಿಚ॥

ಎಂದಿದ್ದಾರೆ. ಕಾಮಿಕಾದಿವಾತುಳದವರೆಗಿನ ಸರ್ವ ಆಗಮಗಳ ಮತ್ತು ಸಮಸ್ತ ಶಿವಪುರಾಣಗಳ ಸಾರವನ್ನು ಸಂಗ್ರಹಿಸಿ ಹೇಳಿರುವುದಾಗಿ ಸೂಚಿಸುತ್ತಾರೆ. ಆದಾಗ್ಯೂ, ಈ ಗ್ರಂಥವು ಸಹ ಭಗವದ್ಗೀತೆಯಂತೆ ಆಧ್ಯಾತ್ಮಿಕ ದರ್ಶನವನ್ನು ಸಾರ್ವಜನಿಕವಾಗಿ ಸೂಚಿಸುವ ಪ್ರಸಿದ್ಧ ಕೃತಿಯಾಗಿದೆ ದಾರ್ಶನಿಕ ದೃಷ್ಟಿಯಿಂದ ಆಗಮಗಳು ಏನನ್ನು ಪ್ರತಿಪಾದಿಸುತ್ತವೆಯೆಂಬುದನ್ನು ತಿಳಿಯಲು ಸಿದ್ಧಾಂತ ಶಿಖಾಮಣಿಯು ಸಹಾಯಕವಾದ ಒಂದು ತತ್ವಸೂಚಿಯಾದ ಕೃತಿಯಾಗಿದೆಯೆನ್ನಬಹುದು. ಹೀಗೆ ವಿಪುಲ ದರ್ಶನಸಾಹಿತ್ಯದ ಸಂಗ್ರಹಸೂಚಿಯ ನಿರ್ಮಾಣಕಾರ್ಯ ಬೌದ್ಧ ಸಾಹಿತ್ಯಕ್ಷೇತ್ರದಲ್ಲೂ ನಡೆದಿದೆ.

# ಬೌದ್ಧಯುಗದ ಉದಯ

ಕ್ರೈಸ್ತಧರ್ಮದ ಉದಯಕ್ಕೆ ಏಳುಶತಮಾನಗಳ ಹಿಂದೆ ಭಾರತಭೂಮಿಯಲ್ಲಿ ಹದಿನಾರು ಪ್ರಾಂತಿಕ ಆಡಳಿತಗಳು ನಡೆಯುತ್ತಿದ್ದುವು. ಅವುಗಳಲ್ಲಿ ಎಂಟು ರಾಜಪ್ರಭುತ್ವದಲ್ಲಿ ಉಳಿದುವು ಪ್ರಜಾಪ್ರಭುತ್ವದಲ್ಲೂ ಆಡಳಿತ ನಡೆಸುತ್ತಿದ್ದುವು. ರಾಜಪ್ರಭುತ್ವದಲ್ಲಿ ಮಗಧ ಮತ್ತು ಕೋಸಲ ರಾಜ್ಯಗಳು ಅತ್ಯಂತ ಬಲಯುತವಾದ ಪ್ರಾಂತ್ಯಗಳಾಗಿದ್ದುವು. ಅಂದು ನೇಪಾಳದಲ್ಲಿ ಶಾಕ್ಯರ ಪ್ರಜಾಪ್ರಭುತ್ವವಿತ್ತು. ಸೂರ್ಯವಂಶಜನಾದ ಶಾಕ್ಯ ಮನೆತನದ ಶುದ್ಧೋದನನು ನಾಯಕನಾಗಿ ರಾಜನೆಂಬ ಅಭಿಧಾನದಿಂದಲೇ ಆಡಳಿತವನ್ನು ನಡೆಸುತ್ತಿದ್ದನು. ಕಪಿಲವಸ್ತು ಶಾಕ್ಯ ಸಾಮ್ರಾಜ್ಯದ ರಾಜಧಾನಿಯಾಗಿತ್ತು. ಕ್ರಿ.ಪೂ. 623ರಲ್ಲಿ ಶುದ್ಧೋದನ ಮತ್ತು ಅವನ ಸತಿ ಮಹಾಮಾಯೆಯ ಪುತ್ರನಾಗಿ ಬುದ್ಧನು ಜನಿಸಿದನು (1) ಅವನಿಗೆ ರಾಜಯೋಗ್ಯವಾಗಿ ಗೌತಮ ಮತ್ತು ಸಿದ್ಧಾರ್ಥ ಎಂದು ನಾಮಕರಣ ಮಾಡಿದರು. ಅವನ ಜನ್ಮಲಕ್ಷಣಗಳನ್ನು ಅರಿತ ದಿವ್ಯಜ್ಞಾನಿಗಳು ಅವನು ಜಗದ್ವಿಖ್ಯಾತ ಮಹಾಪುರುಷನಾಗುವನೆಂದು ಭವಿಷ್ಯನುಡಿದರು. ರಾಜಗೌರವವನ್ನು ಅನುಭವಿಸುತ್ತಿದ್ದ ಶುದ್ಧೋಧನನಿಗೆ ತನ್ನ ಮಗ ಸಾಮ್ರಾಟನಾಗಬೇಕೆಂಬ ಹಂಬಲವಿತ್ತು. ಅದಕ್ಕಾಗಿ ಸರ್ವಪ್ರಯತ್ನವನ್ನು ಮಾಡಿ ವಿಫಲನಾದ ಗೌತಮನು

ಸುಂದರ ಸತಿ, ಅರಿಯದ ಹರೆಯದ ಸುತ. ಭೋಗಭಾಗ್ಯ ಗಳನ್ನೆಲ್ಲಾ ತೊರೆದು ಕಾವಿಯನ್ನುತೊಟ್ಟು ಸನ್ಯಾಸಿ ಯಾದನು. ಮಾನವತೆಯು ನಿಮಿಷ ನಿಮಿಷದಲ್ಲೂ ಪರಿ ತಾಪ ಪಡುವುದನ್ನು ಕಂಡು ಮರುಗಿದನು. ಮಾನವನೇ ಮಾನವನ ಮತ್ತು ನಿರ್ದೋಷಿಯಾದ ಜೀವಜಂತುಗಳ ಕಂಟಕವಾಗಿರುವುದನ್ನು ಕಂಡು ಬೇಸತ್ತನು. ಅದಕ್ಕೆ ಉಪಾಯವನ್ನು ಕಂಡುಹಿಡಿಯಲು ವ್ಯಾವಹಾರಿಕ ಪ್ರಯತ್ನಗಳನ್ನೆಲ್ಲಾ ಮಾಡಿ ವಿಫಲನಾದನು. ಅದಕ್ಕೆ ಆಂತರಿಕವಾದ ಬೆಳಕನ್ನು ಕಾಣಲು ಬಯಸಿ ಘೋರತಪಸ್ಸನ್ನು ಆಚರಿಸಿದನು. ನಾಲ್ಕುವಾರಗಳ ಘೋರ ತಪಸ್ಸನ್ನು ಬೋಧಿವೃಕ್ಷದಡಿಯಲ್ಲಿ ನಡೆಸಿ ಜ್ಞಾನೋದಯವನ್ನು ಪಡೆದನು. ಅಂದೇ ಗೌತಮನು ಬುದ್ಧನಾದನು.

ಅವನಿಗೆ ಉದಯವಾದ ಜ್ಞಾನದ ಬೆಳಕಿನಲ್ಲಿ ಕಂಡ ಸತ್ಯ ನಾಲ್ಕು. ಅದಕ್ಕೆ ಬೌದ್ಧ ಸಿದ್ಧಾಂತದಲ್ಲಿ ಆರ್ಯಸತ್ಯವೆಂದು ಕರೆಯುತ್ತಾರೆ ಜೀವನ ದುಃಖಮಯವಾದುದು. ದುಃಖ ಮೊದಲನೆ ಸತ್ಯ. ಈ ದುಃಖಕ್ಕೆ ಕಾರಣವಿದೆ. ಅದೇ ದುಃಖಸಮುದಾಯ ಎರಡನೇ ಸತ್ಯ. ದುಃಖವನ್ನು ನಿವಾ

---

ಇದೇ ಲೇಖಕರ ವಿಶ್ವವಿದ್ಯಾನಿಲಯದ ಪ್ರಕಟಣೆ ಬುದ್ಧ ಭಗವಾನ್ ಗ್ರಂಥದಲ್ಲಿ ಬುದ್ಧನ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ತಿಳಿಯಬಹುದು.

ರಿಸಲು ಸಾಧ್ಯವಿದೆ. ಅದೇ ದುಃಖ ನಿರೋಧವೆಂಬ ಮೂರನೇ ಸತ್ಯ. ದುಃಖ ನಿವಾರಣೆಗೆ ಮಾರ್ಗಗಳಿವೆ. ಅವುಗಳೇ ದುಃಖ ನಿರೋಧ ಗಾಮಿನೀಪ್ರತಿಪತ್ ಎಂಬ ನಾಲ್ಕನೆಯ ಸತ್ಯ ಸ್ವರೂಪ. ನಾಲ್ಕನೆಯ ಸತ್ಯದ ಸಿದ್ಧಿಗೆ ಎಂಟು ಮಾರ್ಗಗಳು. 1) ಸಮ್ಯಕ್ ದೃಷ್ಟಿ 2) ಸತ್ ಸಂಕಲ್ಪ 3) ಸತ್ ವಾಕ್ 4) ಸತ್ ಕರ್ಮಾಂತ 5) ಸತ್ ಆಜೀವ 6) ಸದ್ ವ್ಯಾಯಾಮ 7) ಸಮ್ಯಕ್ ಸ್ಮೃತಿ 8) ಸಮ್ಯಕ್ ಸಮಾಧಿ ಎಂಬ ಎಂಟು ಮಾರ್ಗಗಳನ್ನು ಅನುಸರಿಸಿ ಮಾನವ ದುಃಖದಿಂದ ಪಾರಾಗಬಹುದೆಂದು ಬುದ್ಧ ಬೋಧಿಸಿದನು. ಅಷ್ಟ ಮಾರ್ಗಗಳು ಹೇಳುವುದಕ್ಕೆ ಸುಲಭ. ಆದರೆ ಆಚರಣೆ ಸುಲಭವಲ್ಲ. ಏಕೆಂದರೆ 1) ಅವಿದ್ಯಾ 2) ಸಂಸ್ಕಾರ 3) ವಿಜ್ಞಾನ 4) ನಾಮರೂಪ 5) ಷಡಾಯತನ (ಪಂಚೇಂದ್ರಿಯ ಮತ್ತು ಮನಸ್ಸು) 6) ಸ್ಪರ್ಶ 7) ವೇದನೆ 8) ತೃಷ್ಣೆ 9) ಉಪಾದಾನ 10) ಭವ 11) ಜಾತಿ ಮತ್ತು 12) ಜರಾಮರಣವೆಂಬ ಹನ್ನೆರಡು ಕೊಂಡಿಯ ಜೀವನ ಚಕ್ರವನ್ನು ಗೆಲ್ಲುವುದು ಅತಿಕಠಿಣವೆಂಬುದನ್ನು ವಿವರಿಸಿದರು 'ಇದೇ ದುಃಖದ ಮೂಲಗಳು. ಇದೇ ಎರಡನೆಯ ಸತ್ಯ.'

ಬುದ್ಧ ಭಗವಾನರು ತಾವು ಕಂಡ ಸತ್ಯವನ್ನು ಪ್ರಥಮವಾಗಿ ಸಾರಾನಾಥದ ಜಿಂಕೆವನದಲ್ಲಿ ಪ್ರಕಟಪಡಿಸಿದರು. ಭಾರತದ ಬಹುಭಾಗವನ್ನು ಪಾದಚಾರಿಗಳಾಗಿ ಸಂಚರಿಸಿ

ಅಹಿಂಸಾ ತತ್ವವನ್ನು ಪ್ರತಿಪಾದಿಸುತ್ತಾ, ಲಕ್ಷಾಂತರ ಜನ ಅನುಯಾಯಿಗಳನ್ನು ಪಡೆದರು. ಅವರ ಸಂದೇಶಕ್ಕೆ ರಾಜಾಧಿರಾಜರನೇಕರು ಮಣಿದರು. ಬಹುಜನರು ಅವರ ತತ್ವದ ಅವಲಂಬಿಗಳಾದರು. ಅವರ ಧರ್ಮ ಪ್ರಚೋದನೆ ವೈದಿಕ ಧರ್ಮದಂತೆ ಕೆಲವರಿಗೇ ಮೀಸಲಾಗಿರದೆ ಎಲ್ಲ ಮತೀಯರಿಗೂ, ಎಲ್ಲ ವರ್ಗದವರಿಗೂ ಅನ್ವಯವಾದುದರಿಂದ ಭಾರತದ ಬಹುಭಾಗ ಅವರ ತತ್ವನಿಷ್ಠೆಗೆ ಮನವೊಲಿಯಿತು. ಅಂತೆಯೇ ಅದೇ ಬೃಹತ್ತಾದ ಸಮಾಜವಾಗಿ ಬೆಳೆಯಿತು. ಅವರ ಸಂದೇಶ ದೇಶ ವಿದೇಶಗಳನ್ನೂ ಮುಟ್ಟಿತು. ಅನ್ಯ ರಾಷ್ಟ್ರಗಳು ಬೌದ್ಧ ಧರ್ಮಾವಲಂಬಿಗಳಾದುವು. ಆದುದರಿಂದ ಈಗಲೂ ಪ್ರಪಂಚದ ಐದನೇ ಎರಡರಷ್ಟು ಜನಸಮುದಾಯ ಬೌದ್ಧಮತಾನುಯಾಯಿಗಳಾಗಿರುವುದನ್ನು ಕಾಣಬಹುದು. ಹೀಗೆ ಧರ್ಮ ಪ್ರಚಾರಮಾಡುತ್ತಾ ಜನಸಮುದಾಯದ ಮೇಲೆ ತಮ್ಮ ಸಂದೇಶದ ಪ್ರಭೆಯನ್ನು ಬೀರಿ ತಮ್ಮ ಎಂಬತ್ತರನೆಯ ವಯಸ್ಸಿನಲ್ಲಿ ಪರಿನಿರ್ವಾಣವನ್ನು ಹೊಂದಿದರು. ಅವರ ಜೀವಿತ ಕಾಲದಲ್ಲಿ ತಾನೇ ಸ್ವತಃ ಯಾವ ಗ್ರಂಥವನ್ನೂ ಬರೆದಿಡಲಿಲ್ಲ. ಅವರ ಅಂತರಂಗದಿಂದ ಹೊರಹೊಮ್ಮಿದ ನುಡಿಗಳು ಜನರ ಮನದಲ್ಲಿ ನೆಲೆಯಾದುವು. ಅವರು ತೋರಿದ ಮಾರ್ಗವನ್ನು ಜನರು ನಿಷ್ಠೆಯಿಂದ ಆಚರಿಸಿದರು. ಅವರ ನಡೆನುಡಿಗಳೆಲ್ಲವೂ ಜನಸಮುದಾಯದಲ್ಲಿ ಸಂಪ್ರದಾಯವಾಗಿ ಬೆಳೆದವು. ಅವರ ಜೀವಿತ ಕಾಲದ ನಂತರ ಅವರ ಸಂದೇಶಗಳು ಚಿರವಾಗಿ

ಉಳಿಯಬೇಕೆಂದು ಅವರ ಧರ್ಮಾವಲಂಬಿಗಳು ಆಲೋಚಿಸಿದರು. ಆ ವೇಳೆಗಾಗಲೇ ಅನೇಕ ಪ್ರಭುತ್ವಗಳು ಈ ಆದರ್ಶವನ್ನು ಒಪ್ಪಿಕೊಂಡು ಅಪ್ಪಿಕೊಂಡು ಪಾಲಿಸುತ್ತಾ ಬಂದಿದ್ದವು. ಆದುದರಿಂದ ಪ್ರಭುತ್ವದ ಆಸರೆಯನ್ನು ಪಡೆದ ಧರ್ಮ ಸ್ಪಷ್ಟವಾಗಿ ರೂಪುಗೊಳ್ಳುವುದಕ್ಕೆ ಕಷ್ಟವಾಗಲಿಲ್ಲ.

ಬುದ್ಧ ಭಗವಾನರಿಗಿಂತ ಹಿಂದೆ ಇದ್ದ ಧರ್ಮ ಪ್ರಬೋಧಕ ಗ್ರಂಥಗಳೆಲ್ಲಾ ಇದ್ದುದು ಸಂಸ್ಕೃತ ಭಾಷೆಯಲ್ಲಿ ಮಾತ್ರ. ಬುದ್ಧ ಯುಗಕ್ಕಿಂತಲೂ ಹಿಂದೆ ಯಾವ ದಾರ್ಶನಿಕ ಕೃತಿಯೂ ಭಾರತದ ಅನ್ಯ ಭಾಷೆಗಳಲ್ಲಿ ಇದ್ದಂತೆ ಕಾಣುವುದಿಲ್ಲ. ಬುದ್ಧಭಗವಾನರು ಜನಸಾಮಾನ್ಯರಿಗಾಗಿ ಧರ್ಮವನ್ನು ಅರಸಿದವರು, ಅವರಿಗಾಗಿ ಅದನ್ನು ಬೋಧಿಸಿದವರು. ಆದುದರಿಂದ ಅಂದು ಉತ್ತರ ಭಾರತದಲ್ಲಿ ಸಾರ್ವಜನಿಕ ಭಾಷೆಯಾಗಿದ್ದ ಪಾಳಿಯಲ್ಲಿ ತಮ್ಮ ಸಂದೇಶಗಳನ್ನು ನೀಡಿದರು. ಬಹುಜನರು ಬುದ್ಧ ತತ್ವಾನುಯಾಯಿಗಳಾಗಲು ಇದೊಂದು ಪ್ರಬಲ ಕಾರಣವೆನ್ನಬಹುದು. ಅಂದಿನ ಕಾಲಕ್ಕೆ ಧರ್ಮವನ್ನು ಜನ ಭಾಷೆಯಲ್ಲಿ ದಿಟ್ಟತನದಿಂದ ಹೇಳಿದುದೇ ಭಾರತದ ಧಾರ್ಮಿಕ ಚರಿತ್ರೆಯಲ್ಲಿ ಮಹಾಕ್ರಾಂತಿಯೆನ್ನಬಹುದು. ವೈದಿಕ ಧರ್ಮದ ಕ್ಲಿಷ್ಟ ಕಟ್ಟಳೆಗಳನ್ನು ಸರಳವಾಗಿಸಿ ಜನರೆಲ್ಲರೂ ಯಾವ ಭಿನ್ನತೆಯೂ ಇಲ್ಲದೆ ಅವಲಂಬಿಸುವಂತಾದ ಮೊದಲ ಕ್ರಾಂತಿ. ಇಂತಹ ಕ್ರಾಂತಿಯ ಹೊಂಗಿರಣಗಳನ್ನು ಚಿರಂತನಗೊಳಿಸುವ ಸಾಹಸಕ್ಕೆ ಧರ್ಮಾವಲಂಬಿಗಳು ಹವಣಿಸಿದರು. ಬುದ್ಧ ಭಗವಾನರು

ಜೀವಂತವಿರುವಾಗ ಅವರೇ ಅಖಂಡ ಧರ್ಮಪ್ರಭುವಾಗಿದ್ದರು. ಅವರ ನುಡಿಯೇ ನಿಧಿಯಾಗಿ ಪರಿಣಮಿಸುತ್ತಿತ್ತು. ಅದೇ ಅಂತ್ಯ ನಿಶ್ಚಯವಾಗುತ್ತಿತ್ತು. ಅವರಂತೆಯೇ ಅವರ ಕಾಲಾನಂತರವೂ ನಡೆಯುವುದಕ್ಕೆ ಅವರ ಅಪ್ರತ್ಯಕ್ಷ ಚೇತನವನ್ನು ಜನ ಬಯಸಿತು. ಅದರ ಫಲವಾಗಿ ಅವರು ಗತಿಸಿದ ಕೆಲವು ವಾರಗಳ ನಂತರ ಅಂದರೆ ಕ್ರಿ.ಪೂ. ೪೮೩ರಲ್ಲಿ ರಾಜಗೃಹದಲ್ಲಿ ಬುದ್ಧ ಧರ್ಮಾವಲಂಬಿಗಳ ಪ್ರಥಮ ಸಮ್ಮೇಳನ ಜರುಗಿತು. ಆ ಸಮ್ಮೇಳನದಲ್ಲಿ ಸಮಾಜದ ಶಿಸ್ತು ಪರಿಪಾಲನೆಯ ನಿಯಮಾವಳಿಯನ್ನು ಗೊತ್ತುಪಡಿಸುವುದೇ ಪ್ರಧಾನ ಉದ್ದಿಶ್ಯವಾಯಿತು. ನಿಯಮಾವಳಿಗಳ ವಿಷಯದಲ್ಲಿ ಸಮಾನಮತ ಬರದೆ ಧರ್ಮಾವಲಂಬಿಗಳಲ್ಲಿ ಎರಡು ಬಣಗಳಾದುವು. ಮತ್ತೆ ಕೆಲವು ಕಾಲದ ನಂತರ ವೈಸಾಳಿಯಲ್ಲಿ ಎರಡನೆಯ ಮಹಾ ಸಭೆ ಸೇರಿತು. ಅಲ್ಲಿ ಹಲಕೆಲವು ಮಾರ್ಪಾಡುಗಳಾಯಿತು. ಅನಂತರ ಕ್ರಿ. ಪೂ. ೨೪೯ರಲ್ಲಿ ಪಾಟಲೀಪುತ್ರದಲ್ಲಿ ಮೂರನೇ ಮಹಾಸಭೆಯನ್ನು ಅಶೋಕ ಚಕ್ರವರ್ತಿಯು ಸೇರಿಸಿದನು. ಅಲ್ಲಿ ತಾತ್ವಿಕವಾದ ವಿವೇಚನೆ ನಡೆಯಿತು. ನಂತರ ಕ್ರಿ.ಪೂ. ಒಂದು ಅಥವಾ ಎರಡನೆಯ ಶತಮಾನದಲ್ಲಿ ನಾಲ್ಕನೆಯ ಸಭೆಯನ್ನು ಕಾನಿಷ್ಕ ದೊರೆಯು ಸೇರಿಸಿದನು. ಈ ಸಭೆ ಜಲಂಧರದಲ್ಲೋ ಅಥವಾ ಕಾಶ್ಮೀರದಲ್ಲೋ ನಡೆದಿರಬೇಕೆಂದು ಸಂಶೋಧಕರು ಅಭಿಪ್ರಾಯಪಡುತ್ತಾರೆ. ಈ ನಾಲ್ಕು ಅಧಿವೇಶನಗಳಲ್ಲಿ ಬುದ್ಧಭಗವಾನರ ಸಂದೇಶವು ಕೃತಿರೂಪಕ್ಕೆ ಬರಲು ಅವಕಾಶವಾಯಿತು.

ಮೊದಲನೆಯ ಅಧಿವೇಶನದಲ್ಲಿ ವಿನಯ ಅಂದರೆ ಸಮಾಜದ ನಿಯಮಾವಳಿಗಳನ್ನು ಮತ್ತು ಧರ್ಮದ ಕೆಲವು ರೂಪುರೇಷೆಗಳನ್ನು ನಿಶ್ಚಯಿಸಿ ಕೃತಿಗಿಳಿಸಲಾಯಿತು. ಎರಡನೆಯ ಅಧಿವೇಶನದಲ್ಲಿ ಧರ್ಮದ ಪೂರ್ಣಸ್ವರೂಪ ಚಿತ್ರಣವಾಯಿತು. ಮೂರನೆಯ ಅಧಿವೇಶನವು ಧರ್ಮಸೂತ್ರಗಳ ರಚನೆಯಲ್ಲಿ ನಿರತವಾಗಿ ಅಭಿಧರ್ಮ ಕೃತಿಯನ್ನು ನೀಡಿತು. ಮೊದಲ ಮೂರು ಅಧಿವೇಶನಗಳು ಬುದ್ಧ ಭಗವಾನರ ಸಂದೇಶಗಳಿಗೆ ರೂಪುಕೊಟ್ಟವು. ಅವು ಸೂತ್ರವಾಗಿ ಪರಿಣಮಿಸಿದುವು. ಹೀಗೆ ಮೂರು ಬಗೆಯ ಮೂಲ ಕೃತಿಗಳ ರಚನೆಯಾಯಿತು. ಇವುಗಳಿಗೆ ತ್ರಿಪಿಟಕಗಳೆಂದು ಕರೆಯುತ್ತಾರೆ. ಪಿಟಕ ಎಂದರೆ ಬುಟ್ಟಿ ಎಂದರ್ಥ. ಅವುಗಳ ಪ್ರತ್ಯೇಕತೆಯನ್ನು ಸೂಚಿಸುವುದಕ್ಕಾಗಿ ಪಿಟಕ ಶಬ್ದದ ಬಳಕೆಯಾಗಿರಬಹುದು. ಇವುಗಳಲ್ಲಿ ವಿನಯಪಿಟಕವು ಸಂಘದ ನಿಯಮಾವಳಿಗಳನ್ನು ಅಭಿಧರ್ಮ ಪಿಟಕವು ದಾರ್ಶನಿಕ ವಿಚಾರಗಳನ್ನೂ ಸುತ್ತಪಿಟಕವು ಬುದ್ಧ ಭಗವಾನರ ಆಜ್ಞಾರೂಪದ ಸಂದೇಶಗಳನ್ನು ತಿಳಿಯಪಡಿಸುತ್ತದೆ. ಇವು ಮೂರೂ ಬೌದ್ಧ ಧರ್ಮದ ಮೂಲ ಪವಿತ್ರ ಕೃತಿಗಳು. ಇವು ಮೂಲದಲ್ಲಿ ಪಾಳಿ ಭಾಷೆಯಲ್ಲಿ ಜನ್ಮವೆತ್ತಿದುವು. ನಂತರ ಸಂಸ್ಕೃತದಲ್ಲೂ ಮತ್ತು ವಿದೇಶ ಭಾಷೆಗಳಲ್ಲೂ ಭಾಷಾಂತರಗೊಂಡಿವೆ. ಕಾನಿಷ್ಕನ ನೇತೃತ್ವದಲ್ಲಿ ನಡೆದ ನಾಲ್ಕನೆಯ ಅಧಿವೇಶನವು ಈ ಪಿಟಕಗಳಿಗೆ ಬೃಹತ್ ವ್ಯಾಖ್ಯಾನವನ್ನು ಬರೆಯಲು ನೆರವಾಯಿತು. ಅವನ ನೆರವಿನಿಂದ ಒಂದೊಂದು ಪಿಟಕದ

ಮೇಲೆ ಒಂದೊಂದು ಲಕ್ಷ ಶ್ಲೋಕಗಳಷ್ಟು ವ್ಯಾಖ್ಯಾನ ಬರೆಯಲಾಯಿತೆಂದು ಸಂಶೋಧಕರು ಅಭಿಪ್ರಾಯಪಡುತ್ತಾರೆ.

## ಪಿಟಕಗಳ ವಿವರಣೆ

ವಿನಯಪಿಟಕ ಐದು ಸಂಪುಟಗಳ ಕೃತಿ. ಅದರಲ್ಲಿ ಸುತ್ತ ವಿಭಂಗ, ಖಂಡಕ ಮತ್ತು ಪರಿವಾರ ಎಂಬ ಮೂರು ಮೂಲ ಭಾಗಗಳು. ಸುತ್ತ ವಿಭಂಗವಲ್ಲಿ ಮಹಾದಿ ಭಂಗ ಮತ್ತು ಭಿಕ್ಖುನಿ ವಿಭಂಗ ಎಂದೂ ಖಂಡಕವಲ್ಲಿ ಮಹಾ ವಗ್ಗ ಮತ್ತು ಚಲುವ ವಗ್ಗ ಎಂದೂ ಎರಡು ಭಾಗಗಳಾಗಿದೆ. ಸುತ್ತ ಪಿಟಕವು ಐದು ಸಂಪುಟಗಳಿಂದ ಕೂಡಿದ ಬೃಹತ್ ಕೃತಿ. ಆದರೆ ಐದನೆಯದರಲ್ಲಿ ಮತ್ತೆ ಹದಿನೈದು ಸಂಪುಟಗಳಾಗಿವೆ. ದಿಗ್ಘನಿಕಾಯ, ಮಜ್ಜಿಮನಿಕಾಯ, ಸಂಯುತ್ತನಿಕಾಯ, ಅಂಗುತ್ತರನಿಕಾಯ ಮತ್ತು ಖುದ್ದಕನಿಕಾಯ ಇವು ಮೂಲ ವಿಭಾಗಗಳು. ಖುದ್ದಕನಿಕಾಯದಲ್ಲಿ ಖುದ್ದಕಪಾಠ, ದಮ್ಮಪದ, ಉದಾನ, ಇತಿವೃತ್ತಕ, ಸುತ್ತನಿಪಾತ, ವಿಮಾನ ಮತ್ತು, ಪೇಟ ವತ್ತು, ತೇರಗಾಥ, ತೇರೀಗಾಥ, ಜಾತಕ, ನಿದ್ದೇಶ, ಪತಿ ಸಂಭಿದಾ, ಅಪದಾನಾ, ಬುದ್ಧವಂಶ ಮತ್ತು ಚರಿಯ ಪಿಟಕವೆಂಬ ಹದಿನೈದು ಉಪಸಂಪುಟಗಳಿವೆ. ಹಾಗೆಯೇ ಅಭಿದಮ್ಮ ಪಿಟಕವು ಏಳು ಸಂಪುಟಗಳ ಕೃತಿ. ದಮ್ಮಸಂಗಾನಿ, ವಿಭಂಗ, ಧಾತುಕಥಾ, ಪುಗ್ಗಲಿ

ಪನ್ನಟ್ಟಿ, ಕಥಾವತ್ತು, ಯಮಕ ಮತ್ತು ಪಟ್ಠಾನ ಇವು ಗಳೇ ಅಭಿಧಮ್ಮದ ಸಂಪುಟಗಳು. ಇವುಗಳಿಂದ ಬೌದ್ಧ ಧರ್ಮದ ಮೂಲಕೃತಿಗಳ ಬಾಹುಳ್ಯವನ್ನು ನಾವು ಗಮನಿಸ ಬಹುದು. ಈ ಮೂರು ಪಿಟಕಗಳ ಆಧಾರದ ಮೇಲೆ ಹಲ ವಾರು ಪಾಳಿ ಗ್ರಂಥಗಳು ಬೆಳೆದುವು. ಧರ್ಮವು ದಾರ್ಶನಿಕ ರೂಪ ತಾಳಿದ ಮೇಲೆ ತಾರ್ಕಿಕರೂ ಉದಯಿಸಿದರು. ಈ ಗ್ರಂಥ ನಿರ್ದೇಶನಗಳನ್ನೇ ಆಧಾರವಾಗಿಟ್ಟುಕೊಂಡು ತರ್ಕ ಬದ್ಧವಾದ ಸಂಸ್ಕೃತ ಕೃತಿಗಳನ್ನು ರಚನೆಮಾಡಿದ ಮಹಾಮ ಧಾವರು ಬೌದ್ಧ ಧರ್ಮದಲ್ಲಿ ಉದಯಿಸಿದರು. ಆದುದರಿಂದ ಬೌದ್ಧ ಧರ್ಮ ದರ್ಶನಗಳ ಗ್ರಂಥ ಸಮುದಾಯವು ಅಪಾರ ವಾಗಿ ಬೆಳೆಯಿತು. ಅದರ ವಿವರಣೆ ಇಲ್ಲಿ ಅಗತ್ಯವಿಲ್ಲ. ಹೀಗೆ ತನ್ನ ಕೃತಿ ಮತ್ತು ಮತಿಯ ಪ್ರಭಾವದಿಂದ ಸುಮಾರು ಎರಡೂವರೆ ಸಹಸ್ರ ವರ್ಷದ ಹಿಂದೆ ಉದಯಿಸಿದ ಬೌದ್ಧ ಧರ್ಮ ಜಗತ್ತಿನ ಧರ್ಮಗಳಲ್ಲಿ ಅಗ್ರಗಣ್ಯ ಸ್ಥಾನವನ್ನು ಇಂದಿಗೂ ಪಡೆದಿದೆ.

ಬುದ್ಧ ಭಗವಾನರ ಸಂದೇಶಗಳೆಲ್ಲಾ ವಿವರಿಸುವ ಗ್ರಂಥ ಸುತ್ತ ಪಿಟಕ. ಇದು ಪಾಳಿ ಭಾಷೆಯಲ್ಲಿದೆ. ಸುತ್ತ ಪಿಟಕ ದಲ್ಲಿ ಐದು ನಿಕಾಯಗಳು ಅಂದರೆ ಭಾಗಗಳುಂಟು. ದಿಗ್ಘ, ಮಜ್ಝಿಮ, ಸಂಯುತ್ತ, ಅಂಗುತ್ತರ ಮತ್ತು ಖುದ್ದಕ ಇವೇ ಐದು ನಿಕಾಯಗಳು. ಈ ಐದು ಭಾಗಗಳಲ್ಲಿ ವಿಷಯಾನು ಗತವಾಗಿ ವಿಭಾಗಿಸಿದಂತೆ ಕಾಣುವುದಿಲ್ಲ. ಬುದ್ಧರ ಕಾಲ

ವಲ್ಲಿ ಬರವಣಿಗೆ ಹೆಚ್ಚು ಬಳಕೆಯಲ್ಲಿರಲಿಲ್ಲ. ಅಥವಾ ಅವರ ಸಂದೇಶಗಳನ್ನೆಲ್ಲಾ ಬರೆದಿಡುವ ಆಲೋಚನೆಯು ಯಾರಿಗೂ ಬಂದಿರಲಿಲ್ಲ. ಪಿಟಕಗಳು ಅವರ ನಿರ್ವಾಣದ ನಂತರವೇ ರಚಿತವಾದುವೆಂದು ಹಿಗೆ ಹೇಳಿದೆಯಷ್ಟೆ. ಐದು ನಿಕಾಯಗಳಲ್ಲಿ ಬರುವ ವಿಷಯವೂ ಅವರ ಸಂದೇಶವೇ ಆಗಿದೆ. ಇದು ಬುದ್ಧರ ವಾಣಿಯನ್ನು ಕೇಳಿದ ಶಿಷ್ಯ ಪರಂಪರೆಯು ಸಂಗ್ರಹಿಸಿ ತಮ್ಮ ನೆನಪಿನಿಂದ ಹೇಳಿದ ಅಂಶಗಳು. ಮೊದಲ ನಾಲ್ಕು ನಿಕಾಯಗಳಲ್ಲಿ ವಿಷಯಾನುಗತವಾದ ಸಂಗ್ರಹಣೆ ಇದ್ದಂತೆ ತೋರಿಬಂದರೂ ಒಂದರಲ್ಲಿರುವ ವಿಷಯವೇ ಮತ್ತೊಂದರಲ್ಲೂ ಬರುತ್ತದೆ. ಒಂದೇ ರೀತಿಯ ಅರ್ಥಬರುವ ವಿಷಯಗಳು ಭಿನ್ನ ಶಬ್ದಗಳಲ್ಲಿ ಅನ್ಯ ನಿಕಾಯಗಳಲ್ಲೂ ಬರುತ್ತವೆ. ಇಲ್ಲಿ ಮೊದಲ ನಾಲ್ಕು ನಿಕಾಯಗಳ ಹೆಚ್ಚು ವಿವರಣೆ ಅಗತ್ಯವಿಲ್ಲ.

ಖುದ್ದಕ ಎಂದರೆ "ಪುಟ್ಟದಾದ" (Small) ಎಂದು ಅರ್ಥ. ಆದರೆ ಖುದ್ದಕ ನಿಕಾಯದ ವಿಷಯಗಳನ್ನು ನೋಡಿದರೆ ಈ ಹೆಸರು ಅನ್ವಯವಾಗುತ್ತದೆಂದು ಹೇಳುವುದಕ್ಕಾಗುವುದಿಲ್ಲ. ಮೊದಲ ನಾಲ್ಕು ನಿಕಾಯಗಳಲ್ಲಿ ಬರುವ ವಿಷಯಾನುಕ್ರಮಣಿಕೆಯಲ್ಲಿ ಸೇರಿಸಲು ಯುಕ್ತವಲ್ಲವೆಂದು ಅಂದಿನ ಭಿಕ್ಷುಗಳು ಭಾವಿಸಿದ್ದ ಬುದ್ಧನ ಯುಕ್ತಿಗಳನ್ನೆಲ್ಲಾ ಖುದ್ದಕ ನಿಕಾಯದಲ್ಲಿ ಸೇರಿಸಿದರು. ಒಂದೊಂದು ಪ್ರಾಂತ್ಯದ ಭಿಕ್ಷುಗಳೂ ತಮ್ಮ ನೆನಪಿನಲ್ಲಿ ಉಳಿದ ಸಂದೇಶಗಳನ್ನು

ಪಿಟಕದ ರಚನೆಯ ಕಾಲಕ್ಕೆ ಹೇಳುತ್ತಾ ಬಂದಿರುವುದರಿಂದ ಅದರಲ್ಲಿ ಇದಿನೈದು ಸಂಪುಟಗಳಾಯಿತು ಎನ್ನಬಹುದು. ಆದರೆ ಧಮ್ಮಪದದಲ್ಲಿ ಬರುವ ಸೂಕ್ತಿಗಳು ಮಾತ್ರ ಸರ್ವ ಸಮ್ಮತವೆಂದು ಒಪ್ಪಿತವಾಗಿರುವುದು ಒಂದು ವೈಶಿಷ್ಟ್ಯ ವೆನ್ನಬಹುದು. ಇದರಲ್ಲಿ ಬರುವ ವಿಷಯಗಳೆಲ್ಲಾ ಸಾರ್ವ ಕಾಲಿಕ ಮತ್ತು ಸಾರ್ವಜನಿಕವಾಗಿವೆ. ಆದುದರಿಂದಲೇ ಈ ಕೃತಿ ಸರ್ವ ಮಾನ್ಯತೆಯನ್ನು ಪಡೆದಿದೆ. ಭಗವದ್ಗೀತೆ ಯಂತೆ ಈ ಕೃತಿ ರಚನೆಗೆ ಯಾವುದಾದರೂ ಪ್ರಾಸಂಗಿಕ ವಾದ ಹಿನ್ನೆಲೆಯಿತ್ತೆಂದು ಹೇಳಲು ಸಾಧ್ಯವಿಲ್ಲ. ಬುದ್ಧ ಭಗ ವಾನರು ಯಾರೋ ಒಬ್ಬ ಶಿಷ್ಯನನ್ನು ಕುರಿತು ನೀಡಿದ ಉಪದೇಶವೆನ್ನಲಾಗುವುದಿಲ್ಲ. ಸಹಸ್ರಾರು ಜನರು ಅವರ ಹಿಂಬಾಲಕರಾಗಿ ಧರ್ಮ ಪ್ರಚಾರಮಾಡುತ್ತಾ ದೇಶಾಟನ ಮಾಡುತ್ತಿದ್ದರು. ಅಂತಹ ಸಮಾರಂಭಗಳಲ್ಲಿ ಆಯಾ ಪ್ರದೇ ಶದ ಸಹಸ್ರಾರು ಜನರು ಸಮಾವೇಶಗೊಳ್ಳುತ್ತಿದ್ದರು. ಇಂತಹ ಸಂದರ್ಭಗಳಲ್ಲಿ ಕಾಲೋಚಿತವಾಗಿ ಬಳಸಿದ ಸಂದೇ ಶಗಳು ಒಂದೆಡೆ ಸಂಗ್ರಹವಾಗಿರಬೇಕು. ಆದ್ದಾಗ್ಯೂ ಇದು ಸಾರ್ವಜನಾದರಣೀಯ ಗ್ರಂಥವಾಗಿದೆ. ಗ್ರಂಥದ ಹೆಸರು ಮತ್ತು ಇದು ಪಾಳಿ ಭಾಷೆಯಲ್ಲಿರುವುದರಿಂದ ಬೌದ್ಧಗ್ರಂಥ ವೆಂಬ ಅಭಿಪ್ರಾಯ ನಮಗೆ ಬರುತ್ತದೆ. ಆದರೆ ಅಂದಿನ ಪರಿ ಸ್ಥಿತಿಯನ್ನು ಮನಗಂಡ ಬುದ್ಧ ಭಗವಾನರು ಅನುಕಂಪ ದಿಂದ ಅಖಂಡ ಮಾನವತೆಗೆ ನೀಡಿದ ಸಂದೇಶ ಇಲ್ಲಿದೆ. ಆದುದರಿಂದಲೇ ಬೌದ್ಧ ಗ್ರಂಥಗಳಲ್ಲೆಲ್ಲಾ ಅತ್ಯಂತ ಹೆಚ್ಚಿನ

ಭಾಷೆಗಳಲ್ಲಿ ಭಾಷಾಂತರವಾಗಿರುವ ಗ್ರಂಥವಾಗಿದೆ. ಈ ಗ್ರಂಥವು ಬೌದ್ಧ ಧರ್ಮಾವಲಂಬಿಗಳಾದ ಬರ್ಮಾ, ಚೈನಾ, ಜಪಾನ್, ನೇಪಾಳ, ಟಿಬೆಟ್ ಮುಂತಾದ ಹಲವಾರು ಪೌರ್ವಾತ್ಯ ಭಾಷೆಗಳಲ್ಲಿ ಭಾಷಾಂತರವಾಗಿ ಆಯಾ ರಾಷ್ಟ್ರಗಳಲ್ಲಿ ರಾಷ್ಟ್ರೀಯ ಧರ್ಮಪ್ರವರ್ತಕ ಕೃತಿಯಾಗಿ ಕೀರ್ತಿ ಪಡೆದಿದೆ. ಬೌದ್ಧ ಧರ್ಮಾವಲಂಬಿಗಳಲ್ಲದ ಪಾಶ್ಚಾತ್ಯ ರಾಷ್ಟ್ರಗಳಲ್ಲೂ ಈ ಗ್ರಂಥ ಮಹತ್ವವನ್ನು ಪಡೆದಿದೆ. ಅನೇಕ ಪಂಡಿತರು ಈ ಕೃತಿಯನ್ನು ಮೆಚ್ಚಿ ಹಲವಾರು ಭಾಷೆಗಳಿಗೆ ಭಾಷಾಂತರ ಮಾಡಿದ್ದಾರೆ. ಬಹುಶಃ ಭಾರತದ ಧರ್ಮ ಗ್ರಂಥಗಳಲ್ಲಿ ಭಗವದ್ಗೀತೆಯನ್ನು ಬಿಟ್ಟರೆ ಧಮ್ಮಪದವು ಇತರ ಭಾಷೆಗಳಲ್ಲಿ ಭಾಷಾಂತರ ಹೊಂದಿರುವಷ್ಟು ಮತ್ತಾವ ಗ್ರಂಥವೂ ಆಗಿಲ್ಲವೆನ್ನಬಹುದು.

ಹತ್ತೊಂಬತ್ತನೆಯ ಶತಮಾನದಲ್ಲಿ ಈ ಗ್ರಂಥ ಪಾಶ್ಚಾತ್ಯ ಭಾಷೆಗಳಲ್ಲಿ ಭಾಷಾಂತರವಾಗಿ ಪ್ರಚಲಿತವಾಗಲಾರಂಭಿಸಿತು. ಕೋಪನ್ ಹೇಗನ್ನಿನ ವಿನ್ಸೆಂಟ್ ಫೌಸ್‌ಬಾಲ್ ಎಂಬುವರು ಇದನ್ನು ಲ್ಯಾಟಿನ್ ಭಾಷೆಗೆ ಭಾಷಾಂತರಮಾಡಿ ಸಂಶೋಧನಾತ್ಮಕ ಕೃತಿಯನ್ನೀ ಪ್ರಕಟಿಸಿದರು. ಮ್ಯಾಕ್ಸ್‌ಮಿಲ್ಲರ್ ರವರು ಇಂಗ್ಲಿಷ್ ಭಾಷೆಯಲ್ಲೂ, ಎ. ವೆಬ್‌ರ್, ಲಿಯೋಪಾಲ್ಡ್ ವಾನ್ ಸ್ಕ್ರೈಡರ್, ನ್ಯೂಮನ್, ಪಾಲ್ಕೆ, ವಾಲ್ಟರ್ ಮಾರ್ಕ್‌ಗ್ರ್ಯಾಫ್, ಆರ್. ಓಟ್ಟೋಫ್ರ್ಯಾಂಕ್ ಮುಂತಾದವರು ಜರ್ಮನ್ ಭಾಷೆಯಲ್ಲೂ ಪಿ.ಇ.ಪವೋಲಿನಿಯವರು ಇಟಾಲಿಯನ್ ಭಾಷೆಗೂ, ಮಿಚಲಸ್ಕಿ-ಐವೆನೆಸ್ಕಿ ಇವರು

ಪ್ರೋಲೆಂಡ್ ಭಾಷೆಗೂ, ಫರ್ನಾಂಡೋಹಿರ್ ಮತ್ತು ಆರ್. ಮತ್ತು ಎಂ. ಡಿಸಾರಟ್ರಿ ಇವರು ಫ್ರೆಂಚ್ ಭಾಷೆಗೂ ಭಾಷಾಂತರ ಮಾಡಿ ಈ ಗ್ರಂಥವನ್ನು ಪ್ರಚಾರಮಾಡಿದರು. ಇವುಗಳಲ್ಲದೆ ಇಂಗ್ಲೀಷ್ ಭಾಷೆಯಲ್ಲಿ ಹತ್ತಾರು ಬಾರಿ ಭಾಷಾಂತರವಾಗಿರುವುದು. ಅನ್ಯರಾಷ್ಟ್ರಗಳ ಭಾಷೆಗಳಲ್ಲಿಯೂ ಸಹ ವ್ಯಾಖ್ಯಾನದೊಡನೆ ರಚಿತವಾಗಿರುವುದೂ ತಿಳಿಯು ಬರುತ್ತದೆ. ಈ ಕಾರಣಗಳಿಂದ ಈ ಕೃತಿಯ ಮಹಿಮೆ ಎಷ್ಟೆಂಬುದನ್ನು ನಾವು ಅರಿಯಬಹುದಾಗಿದೆ. ಈ ಕೃತಿ ನೈತಿಕ ವಿಷಯವನ್ನೇ ಪ್ರತಿಪಾದಿಸುತ್ತದೆಂದು ಹೇಳಿದೆ.

ಬೌದ್ಧ ಸಂಪ್ರದಾಯದಲ್ಲಿ ತರ್ಕಬದ್ಧ ಸಿದ್ಧಾಂತ, ಸಂಪ್ರದಾಯ ಬದ್ಧ ಧರ್ಮ, ಆಚಾರ, ವಿಚಾರ, ವ್ಯವಹಾರ ಪ್ರಚೋದಕ ಗ್ರಂಥಗಳಿಗೆ ಕೊರತೆಯಿಲ್ಲ. ಅವುಗಳ ವಿವೇಚನೆ ಇಲ್ಲಿ ಅಪ್ರಸ್ತುತ. ಬೌದ್ಧ ಧರ್ಮವು ಜಗತ್ತಿನ ಧರ್ಮ ಸಾಹಿತ್ಯಕ್ಕೆ ನೀಡಿರುವ ಅಮೂಲ್ಯ ಕಾಣಿಕೆಗಳಲ್ಲಿ ಧಮ್ಮಪದವು ಒಂದೆಂಬುದನ್ನು ಮರೆಯಲಾಗುವುದಿಲ್ಲ. ಬೌದ್ಧ ಧರ್ಮದ ಅತ್ಯಮೂಲ್ಯ ಗ್ರಂಥಗಳಲ್ಲಿ ಅನೇಕ ಗ್ರಂಥಗಳು ತಮ್ಮ ಮೂಲ ಭಾಷೆಯಾದ ಪಾಳಿ ಭಾಷೆಯಲ್ಲಿ ನಮಗೆ ದೊರೆಯುತ್ತಿಲ್ಲ. ನೇಪಾಳಿ, ಟಿಬೆಟ್, ಚೈನಾ ಭಾಷೆಗಳಿಂದ ಪಾಳಿ ಭಾಷೆಗೂ ಸಂಸ್ಕೃತ ಭಾಷೆಗೂ ಮೂಲ ಗ್ರಂಥಗಳನ್ನು ಪರಿವರ್ತಿಸಲು ಅನೇಕ ಪಂಡಿತರು ಶ್ರಮಿಸಿದ್ದಾರೆ ಮತ್ತು ಆ ಪ್ರಯತ್ನ ಇಂದಿಗೂ ಮುಂದುವರಿಯುತ್ತಿದೆ. ಆದರೆ "ಧರ್ಮ ಪಥವು" ಮೂಲ ಪಾಳಿ ಭಾಷೆಯಲ್ಲಿದ್ದು ಭಾರತ

ಭೂಮಿಯು ಹಲವಾರು ಭಾಷೆಗಳಲ್ಲಿ ವ್ಯಾಖ್ಯಾನ ಮಾಡಲ್ಪಟ್ಟು ಪ್ರಚಲಿತವಾಗಿಯೇ ಉಳಿದು ಬಂದಿರುವುದು ನಮ್ಮ ಸುದೈವ.

## ಗ್ರಂಥ ಪರಿಚಯ

ಧಮ್ಮಪದವು ವಿಶ್ವಸಾಹಿತ್ಯದಲ್ಲಿ ಪರಿಗಣಿಸಲ್ಪಟ್ಟ ಧರ್ಮಗ್ರಂಥವಾಗಿದೆ. ಇದು ಬೌದ್ಧ ಧರ್ಮಾವಲಂಬಿಗಳಾದ ದೇಶಗಳಂತೆ ಅನ್ಯರಾಷ್ಟ್ರಗಳಲ್ಲಿಯೂ ಪ್ರಖ್ಯಾತಿಹೊಂದಿರುವುದಕ್ಕೆ ಅದು ನೂರಾರು ಭಾಷೆಗಳಲ್ಲಿ ಭಾಷಾಂತರವಾಗಿರುವುದೇ ದೊಡ್ಡ ನಿದರ್ಶನವೆನ್ನಬಹುದು. ಇದರಲ್ಲಿ ಬೌದ್ಧ ಸಿದ್ಧಾಂತವನ್ನು ಅವಲಂಬಿಸಿದ ನೈತಿಕ ಸಂದೇಶಗಳಿದ್ದರೂ ಅವು ಸಾರ್ವಜನಿಕವಾಗಿ ಮಾನ್ಯತೆ ಪಡೆಯುವ ನುಡಿಗಳಾಗಿವೆ. ಈ ಕೃತಿಯಲ್ಲಿ ೪೨೩ ಪದ್ಯಗಳುಳ್ಳ ೨೬ ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯಕ್ಕೂ ವಗ್ಗ ಎಂದು ಪಾಳಿ ಭಾಷೆಯಲ್ಲಿ ಕರೆಯಲಾಗಿದೆ. ವಗ್ಗ ಎಂದರೆ ವರ್ಗ ಎಂದು ಹೆಸರು. ಒಂದೊಂದು ಅಂಶವನ್ನು ಪ್ರತ್ಯೇಕ ಅಂಶವಾಗಿ ಗಣಿಸಿರುವುದರಿಂದ ವಗ್ಗ ಅಂದರೆ ವರ್ಗ ಎಂದು ಕರೆದಿವೆ. ಬೌದ್ಧ ತತ್ವದ ಅನುಯಾಯಿಗಳು ಈ ಗ್ರಂಥವನ್ನು ಈಗಲೂ ಕಂಠಪಾಠ ಮಾಡಿ ಹಿಂದೂಗಳು ಭಗವದ್ಗೀತೆ ರಾಮಾಯಣಗಳ ಪಾರಾಯಣ ಮಾಡಿದಂತೆ ತಮ್ಮ ಪ್ರಾರ್ಥನಾ ಸಮಯದಲ್ಲಿ ಪಠಣಮಾಡುವುದುಂಟು.

ಧಮ್ಮ ಎಂದರೆ ಧರ್ಮ ಎಂದರ್ಥ. ಪದ ಎಂದರೆ ಪಥ ಎಂದು ಅರ್ಥ. ಈ ಗ್ರಂಥವನ್ನು ಬೌದ್ಧರು ಧರ್ಮಪಥ ಎಂದು ಕರೆದಿದ್ದಾರೆ. ಭಾರತ ಧರ್ಮದ ತೌರು. ಬೌದ್ಧ ಧರ್ಮವು ಭಾರತದಲ್ಲಿದ್ದ ಅಂದಿನ ಧರ್ಮದ ಮೇಲೆ ಪ್ರತಿ ಕ್ರಾಂತಿಯನ್ನೆಸಗಿದ ನೂತನ ಧರ್ಮ. ಆದುದರಿಂದ ಅಂದಿನ ಧರ್ಮದ ರೂಪುರೇಷೆಗಳನ್ನು ಅದರ ಪ್ರಭಾವವನ್ನು ಸ್ವಲ್ಪ ಮಟ್ಟಿಗೆ ಅರಿತರೆ ಈ ಕೃತಿಯ ಪ್ರಾಶಸ್ತ್ಯವು ನಮಗೆ ಗೋಚರವಾಗುವುದು. ಬುದ್ಧನ ಕಾಲಕ್ಕಿಂತ ಮುಂಚೆ ವೈದಿಕ ಧರ್ಮದ ವಿರುದ್ಧ ತನ್ನ ವಿರೋಧ ಧ್ವಜವನ್ನೆತ್ತಿದ ಧರ್ಮ ಜೈನ ಧರ್ಮ. ಆದರೆ ಅದು ಬೌದ್ಧ ಧರ್ಮದಷ್ಟು ಪ್ರಾಬಲ್ಯವನ್ನು ಪಡೆಯಲು ಶಕ್ಯವಾಗಲಿಲ್ಲ. ಭಾರತೀಯ ಇತಿಹಾಸವು ಪ್ರಾರಂಭವಾಗುವುದೇ ವೈದಿಕ ಸಾಹಿತ್ಯ ಮತ್ತು ವೈದಿಕ ಧರ್ಮದ ಉದಯದ ಕಾಲದಿಂದ ಎಂಬ ಭಾವನೆ ನಮ್ಮಲ್ಲಿ ಇಂದಿಗೂ ಇದೆ. ಎಷ್ಟೋ ಧರ್ಮಗಳು ಇಲ್ಲಿ ಉದಯಿಸಿದರೂ, ಎಷ್ಟೋ ವಿದೇಶೀಯ ಧರ್ಮಾವಲಂಬಿಗಳು ನಮ್ಮ ಮೇಲೆ ಬಹುಕಾಲ ಆಡಳಿತ ನಡೆಸಿದರೂ ವೈದಿಕ ಧರ್ಮ ಕಣ್ಮರೆಯಾಗಲಿಲ್ಲ. ಆದಾಗ್ಯೂ ಜೈನ ಮತ್ತು ಬೌದ್ಧ ಧರ್ಮಗಳು ಅಂದು ಜನಪ್ರಿಯವಾಗಲು ಕಾರಣಗಳೇನು ಎಂಬುದನ್ನು ಸೂಕ್ಷ್ಮವಾಗಿಯಾದರೂ ಅರಿಯಬೇಕು.

ವೈದಿಕ ಧರ್ಮವನ್ನು ಬೋಧಿಸುವ ಗ್ರಂಥಗಳೆಲ್ಲಾ ಇರುವುದು ಸಂಸ್ಕೃತ ಭಾಷೆಯಲ್ಲಿ ಮಾತ್ರ. ಇದು ಸಾಮಾನ್ಯ

ಜನರ ಬಳಕೆಗೆ ಬರುವುದು ಅಂದಿಗೂ ಕಠಿಣವೇ ಆಗಿತ್ತು. ಅಲ್ಲದೆ ಸಂಸ್ಕೃತ ಭಾಷೆಗೆ ನಾನಾರೀತಿಯ ಭಾಷ್ಯಗಳನ್ನು ಬರೆದು ಭಿನ್ನಾಭಿಪ್ರಾಯಗಳನ್ನು ನಿರೂಪಿಸಲು ಸಾಧ್ಯ ವಾಗುವಂತೆ ಜಗತ್ತಿನ ಯಾವ ಭಾಷೆಗೂ ಇರುವುದಿಲ್ಲ. ಆದುದ ರಿಂದ ಈ ಭಾಷೆ ಕೇವಲ ಒಂದು ವರ್ಗದವರ ಭಾಷೆಯಾಗಿ ಅದನ್ನರಿತವರೆ ಇತರರಿಗಿಂತಲೂ ಮೇಲೆಂಬ ಪ್ರತಿಷ್ಠಿತ ಮನೋಭಾವ ಬೆಳೆದುಬಂದಿತ್ತು. ವ್ಯಾಖ್ಯಾನ ನೀಡುವವ ರಲ್ಲಿ ಒಮ್ಮತವಿರಲಿಲ್ಲ. ಭಾಷ್ಯಕಾರರಲ್ಲಿ ಜನತೆ ಪೂರ್ಣಭರ ವಸೆಯಿಡುವುದು ಅಸಾಧ್ಯವಾಗಿತ್ತು. ಅದೇ ಸಮಯದಲ್ಲಿ ಜೈನ ದಾರ್ಶನಿಕರು ತಮ್ಮ ದರ್ಶನದ ರಹಸ್ಯವನ್ನೆಲ್ಲಾ ಜನ ಸಾಮಾನ್ಯರ ಭಾಷೆಯಾದ ಪ್ರಾಕೃತದಲ್ಲೂ ಬೌದ್ಧರು ಪಾಳಿ ಯಲ್ಲೂ ಬೋಧಿಸಲಾರಂಭಿಸಿದುದರಿಂದ ಈ ಧರ್ಮಕ್ಕೆ ಜನಾ ದರಣೆ ದೊರೆಯಿತು.

ಅಂದಿನ ವೈದಿಕ ಧರ್ಮ ಬೋಧಕರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಗಗಳನ್ನು ಅವರವರ ಮನೆತನದ ಆಧಾರದ ಮೇಲೆ ಕಲ್ಪಿಸಿ ಒಂದೊಂದು ವರ್ಗಕ್ಕೆ ಸಿಕ್ಕುವ ಸಾಮಾಜಿಕ ಸೌಲಭ್ಯಗಳು ಮತ್ತೊಂದಕ್ಕೆ ಸಿಕ್ಕ ದಂತೆ ಸಾಮಾಜಿಕ ವ್ಯವಸ್ಥೆಯನ್ನೇರ್ಪಡಿಸಿದ್ದರು. ವೈದಿಕ ಪಾಂಡಿತ್ಯಕ್ಕೆ ಮಾರುಹೋದ ಕ್ಷತ್ರಿಯರು ಅವರಿಗೆ ಪೋಷಕ ರಾಗಿ ನಿಂತು ಉಳಿದವರನ್ನು ದಾಸಾನುದಾಸರಾಗಿ ಮಾಡಿ ಅವರ ಧಾರ್ಮಿಕ ಸ್ವಾತಂತ್ರ್ಯದ ಹರಣಮಾಡಿದ್ದರು.

ಬೌದ್ಧಧರ್ಮವು ಎಲ್ಲ ವರ್ಗಗಳಿಗೂ ಧರ್ಮ ಕ್ಷೇತ್ರದಲ್ಲಿ ಸಮಾನ ಅವಕಾಶವನ್ನು ನೀಡಲು ಮುಂದಾಯಿತು. ಕ್ಷತ್ರಿಯ ವರ್ಗದವರ ಕ್ಷೇಮಕ್ಕಾಗಿ ಬ್ರಾಹ್ಮಣ ವರ್ಗದವರು ಯಜ್ಞಯಾಗಾದಿಗಳನ್ನು ನೆರವೇರಿಸುತ್ತಿದ್ದರು. ಶೂದ್ರರು ಅದಕ್ಕಾಗಿ ಸೌದೆಯನ್ನು ಒದಗಿಸುವುದು, ಮಂಟಪಗಳನ್ನು ನಿರ್ಮಿಸುವುದು ಹಸು, ಕುರಿ, ಮೇಕೆ, ಜಿಂಕೆ, ಕುದುರೆ ಮುಂತಾದ ಸಾಧುಪ್ರಾಣಿಗಳನ್ನು ಯಾಗಕ್ಕಾಗಿ ಹಿಡಿದು ತಂದೊಪ್ಪಿಸುವುದು ಮುಂತಾದ ಸೇವಾಕಾರ್ಯಗಳಲ್ಲಿ ತೊಡಗಿದ್ದರು. ಹೀಗೆ ವರ್ಗಭೇದ ಮಾಡುವುದನ್ನು ಜನ ಸಹಿಸದಾಯಿತು. ಆದರೆ ಕ್ಷತ್ರಿಯ ಬಲದಿಂದ ಪರಿಪೋಷಿಸಲ್ಪಟ್ಟ ವೈದಿಕ ಧರ್ಮವನ್ನು ಎದುರಿಸುವ ಸಾಹಸ ಯಾರಿಗೂ ಇರಲಿಲ್ಲ. ಇಷ್ಟವಿಲ್ಲದಿದ್ದರೂ ಸೇವೆಯನ್ನಸಗಬೇಕಾದ ನಿರ್ಬಂಧವಿತ್ತು. ಈ ಪರಿಸ್ಥಿತಿಯನ್ನು ದಿಗ್ಘನಿಕಾಯದ ಕೂಟದಂತ ಸೂತ್ರದಲ್ಲಿ ವಿಪುಲವಾಗಿ ವರ್ಣಿಸಿದೆ.

ಯಜ್ಞಯಾಗಾದಿಗಳನ್ನು ಜೈನ ಹಾಗೂ ಬೌದ್ಧ ಧರ್ಮಗಳು ವಿರೋಧಿಸಿದುವು. ಅಹಿಂಸಾವಾದವೇ ಈ ಎರಡು ಧರ್ಮಗಳ ಪ್ರಗತಿಗೆ ಬುನಾದಿಯಾಯಿತು. ಅಹಿಂಸಾ ತತ್ತ್ವ ಈ ಧರ್ಮಗಳ ಉದಯಕ್ಕಿಂತ ಪೂರ್ವದಲ್ಲೇ ಇದ್ದಿತು. ಮಹಾಭಾರತದ ಶಾಂತಿಪರ್ವದಲ್ಲಿ ಯಜ್ಞಕ್ಕೆ ಧಾನ್ಯವನ್ನು ಮಾತ್ರ ಆಹುತಿ ನೀಡಬೇಕೆಂದೂ ಆದರೆ ಅದೇ ಪರ್ವದ ಮತ್ತೊಂದೆಡೆಯಲ್ಲಿ ದೇವತೆಗಳ ಪ್ರೀತಿಗಾಗಿ ಪ್ರಾಣಿಗಳನ್ನೇ

ಬಲಿಕೊಡಬೇಕೆಂದೂ ಹೇಳಿದೆ. ಭಾಗವತದಲ್ಲಿಯೂ ಜೀವ ಪ್ರಾಣಿ ವಧೆ ತಪ್ಪಲ್ಲವೆಂದು ವಾದಿಸಿದೆ. ಕೊನೆಗೆ ನಾಗರಿಕರಾದ ಜನರು ಪ್ರಾಣಿಗಳಿಗೆ ಬದಲಾಗಿ ಹಿಟ್ಟಿನಿಂದ ಮಾಡಿದ ಪ್ರಾಣಿರೂಪವನ್ನು ಬಲಿಕೊಡಲು ಆರಂಭಿಸಿದರೆಂದು ಬೌದ್ಧ ಗ್ರಂಥಗಳು ಸೂಚಿಸುತ್ತವೆ. ದೇವರ ಪ್ರೀತ್ಯರ್ಥವಾಗಿ ಪ್ರಾಣಿ ವಧೆ ಮಾಡುವುದು ತಪ್ಪು ಎನ್ನುವುದನ್ನು ಸಾಧಿಸಲು ಬುದ್ಧ ಭಗವಾನರು ಅನೇಕ ಪಂಡಿತರೊಡನೆ ವಾದ ಮಾಡಿ ತಾವೇ ಜಯಶೀಲರಾದ ಸಂಗತಿಯು ಮಜ್ಝಿಮನಿಕಾಯದ ಅಸ್ಸಲಾಯನ ಸುತ್ತದಲ್ಲಿ ವಿವರಿಸಿದೆ.

ಬೌದ್ಧ ಧರ್ಮಕ್ಕೆ ಮುನ್ನ ಸ್ತ್ರೀಯರಿಗೆ ಸ್ವಾತಂತ್ರ್ಯವೂ ಧರ್ಮಕ್ಷೇತ್ರದಲ್ಲಿ ಸಮಾನಸ್ಕಂದರಾಗಿ ಬಾಳಲು ಅವಕಾಶವಿರಲಿಲ್ಲ. ಮೊದಲು ಸ್ತ್ರೀಯರನ್ನು ಬೌದ್ಧ ಭಿಕ್ಷುಣಿಯರಾಗಿ ಪರಿಗ್ರಹಿಸಲು ಬುದ್ಧಭಗವಾನರೇ ಒಪ್ಪದಿದ್ದರೂ ಕೊನೆಗೆ ಶಿಷ್ಯರ ಒತ್ತಾಯದ ಮೇಲೆ ಸಮ್ಮತಿನೀಡಿದರು. ಧರ್ಮ ಸಮ್ಮತವಾಗಿ ನಡೆದು ಪ್ರಸಿದ್ಧರಾದ ಖೇಮಾ, ಪಟಾಚಾರ, ಧಮ್ಮದಿನ್ನಾ, ಸುಜಾತಾ, ವಿಶಾಖಾ, ಪಜಾಪತಿ, ಅಮ್ರಪಾಲಿ, ಉಪ್ಪಲವನ್ನಾ, ಸುಭಾ, ಕಿಸಾಗೌತಮೀ, ಸೋಮಾ ಮುಂತಾದ ಭಿಕ್ಷುಣಿಯರ ಚರಿತ್ರೆ ಬೌದ್ಧಗ್ರಂಥಗಳಲ್ಲಿ ದೊರೆಯುತ್ತವೆ. ಸ್ತ್ರೀಯರು ಧರ್ಮದ ವಿಚಾರಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದುದು ಪುರುಷರಿಗಿಂತ ಹೆಚ್ಚು ಪಾಂಡಿತ್ಯವನ್ನು ಪಡೆದಿದ್ದರೆಂದೂ ಉಪನಿಷತ್ತಿನಲ್ಲಿ

ಉಲ್ಲೇಖಿಸಲ್ಪಟ್ಟಿದೆ. ಆದರೆ ಬೌದ್ಧಯುಗಕ್ಕೆ ಮುಂಚೆ ಸಾಕಷ್ಟು ರೀತಿಯಲ್ಲಿ ಸ್ತ್ರೀಯರು ಸ್ವತಂತ್ರವಾಗಿ ಧರ್ಮ ಕ್ಷೇತ್ರದಲ್ಲಿ ಅಗ್ರಸ್ಥಾನ ಪಡೆಯಲು ಅವಕಾಶವಿರಲಿಲ್ಲವೆಂದು ತಿಳಿಯಬರುತ್ತದೆ. ಬೌದ್ಧಧರ್ಮ ಎಲ್ಲರಿಗೂ ಇಂತಹ ಸವಕಾಶವನ್ನು ನೀಡಿತೆಂದು ಬೌದ್ಧ ಸಾಹಿತ್ಯದಿಂದ ವ್ಯಕ್ತವಾಗುತ್ತದೆ.

ಅಂದು ಸಮಾಜದ ಸಾಮಾಜಿಕ ಹಾಗೂ ಧಾರ್ಮಿಕ ನಿಯಮಾವಳಿಗಳನ್ನು ರಚಿಸುವ ಅಧಿಕಾರ ಸಾರ್ವಜನಿಕ ರಿಗೆ ಇರಲಿಲ್ಲ. ಕೆಲವೇ ಮಂದಿ ಪಂಡಿತರೆಂದು ಪ್ರಖ್ಯಾತರಾದ ವರು ಬರೆದು ಹೇಳಿದ ಅಂಶಗಳೇ ಕಟ್ಟುನಿಟ್ಟಾದ ನಿಯಮ ಗಳಾಗಿ ಸರ್ವರಿಂದಲೂ ಪಾಲಿಸಲ್ಪಡುತ್ತಿದ್ದುವು. ಬುದ್ಧ ಭಗ ವಾನರು ಇದಕ್ಕೆ ಪ್ರಬಲ ವಿರೋಧವನ್ನು ಸೂಚಿಸಿದರು. ತಮ್ಮ ಅನುಯಾಯಿಗಳನ್ನು ಕುರಿತು ಅವರೇ ಆದೇಶವನ್ನು ನೀಡಿದರು. ನಾನು ಹಿರಿಯನೆಂಬ ಅಭಿಮಾನದಿಂದ ನಾನು ಹೇಳಿದುದನ್ನೆಲ್ಲಾ ಒಪ್ಪಿಕೊಳ್ಳಬೇಕಾಗಿಲ್ಲ. ಪೂರ್ಣವಾಗಿ ವಿಚಾರ ಮಾಡಿ ಸಂಘವು ಒಪ್ಪಿದ ಅಂಶಗಳು ಮಾತ್ರ ಸೂತ್ರಗಳಾಗಬೇಕೆಂದು ತಿಳಿಸಿದ್ದರು. ಆದುದರಿಂದ ಯಾವುದೇ ಅಂಶವಾದರೂ ಸಂಘದಲ್ಲಿ ಚರ್ಚೆಯಾಗುತ್ತಿತ್ತು. ಧಾರ್ಮಿಕ ಪ್ರಜಾಪ್ರಭುತ್ವವನ್ನು ಭಾರತದಲ್ಲಿ ಸ್ಥಾಪಿಸಿದ ಮಹಾನುಭಾವರೇ ಬುದ್ಧಭಗವಾನರೆನ್ನಬಹುದು. ಸಂಘದ ಸದಸ್ಯರೆಲ್ಲರೂ ಸಭೆಸೇರಿ ಸದಸ್ಯರ ನಡೆನುಡಿಗಳನ್ನು ನಿರ್ಧರಿಸ

ಲಾಗುತ್ತಿತ್ತು. ಬಹುಮತಕ್ಕೆ ಉಳಿದವರು ಮಾನ್ಯತೆ ನೀಡಬೇಕಾಗುತ್ತಿತ್ತು. ಇಂತಹ ನಿರ್ಣಯಗಳನ್ನು ಮಾಡುವಾಗ ಪ್ರತಿಯೊಬ್ಬ ಸದಸ್ಯರೂ ತಮ್ಮ ಅಭಿಪ್ರಾಯವನ್ನು ಸೂಚಿಸಲೇಬೇಕೆಂಬ ನಿರ್ಬಂಧವಿತ್ತು. ಆದರೆ ಅವರು ನಿರ್ಭೀತರಾಗಿ ತಮ್ಮ ಅಭಿಮತವನ್ನು ಸೂಚಿಸಬಹುದಾಗಿತ್ತು. ಈ ನಿಯಮಾವಳಿಗಳ ಮೇಲ್ವಿಚಾರಕರಾದ ಅಧಿಕಾರಿಗಳೂ ಸಹ ಜನಮತದಿಂದ ಚುನಾಯಿತರಾಗಬೇಕಾಗಿತ್ತು. ಇಂತಹ ಪ್ರಜಾಪ್ರಭುತ್ವ ಧರ್ಮಕ್ಷೇತ್ರದಲ್ಲಿ ಜನಾದರಣೀಯವಾಯಿತು.

ಜಾತಿ, ಅಧಿಕಾರ, ಐಶ್ವರ್ಯ ಇವು ಕೇವಲ ಕೆಲವರ ಸ್ವತ್ತಾಗಿದ್ದುದರಿಂದ ಬಹುಜನರು ಅವರಿಗೆ ಅಧೀನರಾಗಿ ಅವರ ಆಜ್ಞಾನುವರ್ತಿಗಳಾಗಿ ನಡೆಯಬೇಕಾಗಿತ್ತು. ಜಾತಿಭೇದವನ್ನು ಅಧಿಕಾರಭೇದವನ್ನು ಅಳಿಸುವುದರ ಜೊತೆಗೆ ಐಶ್ವರ್ಯದ ಅಂತರ್ಯವನ್ನು ಅಳಿಸಿದನು. ಬೌದ್ಧಧರ್ಮಾವಲಂಬಿಗೆ ಯಾವ ವಸ್ತುವನ್ನು ತನ್ನದೆಂದು ಹೇಳುವ ಅಧಿಕಾರವಿರಲಿಲ್ಲ. ಅವರು ಪರಿವ್ರಾಜಕಾಚಾರ್ಯರಾಗಿ ಅಲ್ಲಲ್ಲಿ ಭಿಕ್ಷೆಯಿಂದ ದೊರೆತ ಆಹಾರವನ್ನು ಸ್ವೀಕರಿಸಬೇಕಾಗಿತ್ತು. ಕಾಲಕ್ಕನುಗುಣವಾಗಿ ದೊರೆತ ವಸ್ತ್ರವನ್ನು ಮಾತ್ರ ಅವರು ಧರಿಸಬೇಕಾಗಿತ್ತು. ಅದು ಅತ್ಯುಗ್ರ ಸನ್ಯಾಸವೆಂದೇ ಹೇಳಬೇಕು. ಎಲ್ಲ ದೃಷ್ಟಿಯಿಂದ ಸಮಾಜದಲ್ಲಿ ಸಮಾನತೆಯನ್ನು ಸ್ಥಾಪಿಸಲು ಬೌದ್ಧ

ಧರ್ಮವು ನಿರ್ದೇಶಿಸಿತು. ಆದುದರಿಂದ ಬಹುಜನ ಬಡವರನ್ನುಳ್ಳ ಭಾರತದಲ್ಲಿ ಈ ಧರ್ಮಕ್ಕೆ ಮಾನ್ಯತೆ ದೊರೆಯಿತು. ಈ ಪರಿಸ್ಥಿತಿಯನ್ನು ಪರಿಚಯ ಮಾಡಿಕೊಂಡಾಗ ಧರ್ಮಪಥದಲ್ಲಿ ಬರುವ ಸಂದೇಶಗಳು ಅಂದಿನ ಕಾಲಕ್ಕೆ ಎಷ್ಟು ಜನ ಪ್ರಿಯತೆಗಳಿಸಿದುವೆಂಬುದನ್ನು ಮನಗಾಣಬಹುದು. ಅಂತೆಯೇ ಧರ್ಮಪಥದ ಪ್ರತಿಯೊಂದು ವರ್ಗವೂ ಒಂದೊಂದು ವಿಷಯವನ್ನು ಪ್ರಸ್ತಾಪಿಸಿ ಎಚ್ಚರ ನೀಡಿದಂತೆ ಭಾಸವಾಗುತ್ತದೆ. ಆ ಉಪದೇಶದ ಬಹುಭಾಗ ಇಂದಿಗೂ ಮತ್ತು ಮುಂದೆಯೂ ಮಾನ್ಯವಾದುದೆಂದು ತಿಳಿಯಬಹುದಾಗಿದೆ.

## ಅಧ್ಯಾಯ ೨

# ದಮ್ಮಪದ ಸಂದೇಶ

### ೧. ಯಮಕ ವಗ್ಗ

ದಮ್ಮಪದದಲ್ಲಿ ಇಪ್ಪತ್ತಾರು ವರ್ಗಗಳಲ್ಲಿ ಬುದ್ಧರು ನೀಡಿದ ಸಂದೇಶಗಳನ್ನು ಕಾಣುತ್ತೇವೆ. ಜಗತ್ತಿನ ಬೌದ್ಧಿಕವಾದ ಎಲ್ಲಾ ಸಂಪತ್ತಿಗೂ ಅತಿ ಶ್ರೇಷ್ಠವಾದ ಸಂಪತ್ತೆಂದರೆ ಮಾನವತ್ವದ ಸಂಪತ್ತು. ಮಾನವನಲ್ಲಿರುವ ಮನಸ್ಸು ಮನುಷ್ಯನ ಎಲ್ಲ ಸಂಪತ್ತಿಗಿಂತಲೂ ಹಿರಿದು. ಮಾನವನು ಅನುಭವಿಸುವ ಕಷ್ಟ ಸುಖಗಳಿಗೆಲ್ಲಾ ಮನಸ್ಸೇ ಕಾರಣ. ದಮ್ಮಪಥದ ಮೊದಲನೆಯದಾದ ಯಮಕ ವಗ್ಗದಲ್ಲಿ ಮನಸ್ಸಿನ ಪ್ರಭಾವವನ್ನು ಹೇಳಿದೆ. ಮನುಷ್ಯನು ಅಶುದ್ಧ ಮನಸ್ಸಿನಿಂದ ಕರ್ತವ್ಯವನ್ನೆಸಗಿದರೆ ಅದರ ಫಲವು ದುಃಖವೇ ಆಗುತ್ತದೆ. ಶುದ್ಧ ಮನಸ್ಸು ಅವನಿಗೆ ಪ್ರಸನ್ನತೆಯನ್ನು ತಂದುಕೊಡುತ್ತದೆ. ಆದುದರಿಂದ ಮಾಸಿಕ ಪ್ರವೃತ್ತಿ ಶುದ್ಧವಾಗಿರಬೇಕೆಂದು ಸಂದೇಶವನ್ನು ಇಲ್ಲಿ ನೀಡಲಾಗಿದೆ. ಎಲ್ಲ ಕಾರ್ಯಗಳ ನಡೆನುಡಿಗಳಹಿನ್ನೆಲೆಯಾಗಿರುವುದು ಮನಸ್ಸು. ಮನಸ್ಸಿನಲ್ಲಿ ಮೂಡದ ಹೊರತು ಯಾವ ಕಾರ್ಯವೂ ಮುಂದುವರಿಯುವುದಿಲ್ಲ. ಅದನ್ನು ನಾವು ತಿಳಿಯಬೇಕೆಂದು ಹೇಳಿದೆ.

"ಮನೋಪುಬ್ಬಂಗಮಾಧಮ್ಮಾ । ಮನೋಸೆಟ್ಠಾ
ಮನೋಮಯಾ ॥

ಅಂದರೆ ಧರ್ಮಗಳಿಗೆ ಮನಸ್ಸು ಮೂಲ ಮತ್ತು ಆದಿ. ಎಲ್ಲ ವ್ಯವಹಾರವೂ ಮನೋಮಯವಾದುವುಗಳೇ. ಆದು ದರಿಂದ ಅದರ ಪರಿಶುದ್ಧತೆ ಅಗತ್ಯ. ಪ್ರಕೃತಿಯು ಮನ ಸ್ಸನ್ನು ಶುದ್ಧವಾಗಿರಲು ಬಿಡುವುದಿಲ್ಲ. ಪರಚಿಂತೆಯಲ್ಲಿ ತಾನೇಕ್ಷಯಿಸುವುದಕ್ಕೂ ಕಾರಣವಾಗುತ್ತದೆ. ಅನ್ಯರು ತನಗೆ ಅನ್ಯಾಯ ಮಾಡಿದರೆಂಬ ಚಿಂತೆ ಮನಸ್ಸನ್ನು ದಹಿಸು ತ್ತದೆ. ಅದೇ ಆಲೋಚನೆಯಲ್ಲಿ ಮನಸ್ಸು ನಿರತವಾದರೆ ಕೊನೆಗೆ ಅನ್ಯರಲ್ಲಿ ವೈರತ್ವ ಬೆಳೆಯುತ್ತದೆ. ವೈರತ್ವ ಸರ್ವ ನಾಶಕ್ಕೆ ದಾರಿ. ವೈರಿಯನ್ನು ವಿಶ್ವಾಸದಿಂದ ಗೆಲ್ಲಬೇಕು. ವೈರತ್ವವನ್ನು ಮನಸ್ಸಿನಲ್ಲಿಟ್ಟುಕೊಂಡು ಮಾನವರು ಬಹು ಕಾಲ ಬದುಕುವುದಿಲ್ಲ. ಒಂದು ದಿನ ಎಲ್ಲರೂ ಮೃತ್ಯುವಿಗೆ ತುತ್ತಾಗಬೇಕು. ಇರುವಷ್ಟು ದಿನ ಪರಸ್ಪರ ಅರಿತು ಬಾಳ ಬೇಕು. ಪರಸ್ಪರ ಸೌಹಾರ್ದದಿಂದ ಬಾಳುವುದರಲ್ಲಿ ಈರ್ವರ ಶ್ರೇಯಸ್ಸಿನ ಸಾಧನೆಯಾಗುತ್ತದೆಂಬ ಸಂದೇಶ ವನ್ನು ಈ ವರ್ಗದಲ್ಲಿ ಸೂಚಿಸಿದೆ.

ಇಂದ್ರಿಯನಿಗ್ರಹವಿಲ್ಲದೆ ಭೋಗ ಜೀವಿಯಾಗಿ ದುರ್ಬ ಲನಾಗಿ, ನಿರುದ್ಯೋಗಿಯಾದವರು ಕಾಮಕ್ಕೆ ತುತ್ತಾಗು ವರು. ಇವುಗಳನ್ನು ಗೆದ್ದವರು ಸರ್ವ ವಿಜಯಿಗಳಾಗುವರು.

ಕೇವಲ ಲಾಂಛನದಿಂದ ಮಾನವ ಶ್ರೇಷ್ಠ ಗುಣಗಳು ವ್ಯಕ್ತವಾಗುವುದಿಲ್ಲ. ಶಮದಮಾದಿ ಸತ್ಯಜೀವಿಯಲ್ಲದವರು ಕಾಷಾಯ ವಸ್ತ್ರಗಳನ್ನು ಧರಿಸಲು ಅರ್ಹರಲ್ಲ. ಆದುದರಿಂದ ಮನಸ್ಸನ್ನು ಸರಿಯಾಗಿ ಬೆಳಸಬೇಕು. ಛಾವಣಿಯಿಲ್ಲದ ಮನೆಯು ವಾಸಕ್ಕೆ ಅನುಪಯುಕ್ತವಾಗುವಂತೆ ಸರಿಯಾಗಿ ಬೆಳೆಸದ ಮನಸ್ಸು ಸರ್ವರಾಗದ್ವೇಷಗಳಿಗೆ ಒಳಗಾಗುತ್ತದೆ. ಮನಸ್ಸನ್ನು ಯಾವಾಗಲೂ ಸತ್ಕಾರ್ಯ ಪ್ರವೃತ್ತವಾಗಿ ಮಾಡಬೇಕು ಎಂದು ಉಪದೇಶಿಸಿದ್ದಾರೆ.

ಅನೇಕ ಗ್ರಂಥಗಳನ್ನು ಅಭ್ಯಾಸಮಾಡಿ ಜನರನ್ನು ಮರುಳು ಮಾಡುವ ಜನರು ಬೌದ್ಧ ಯುಗದಲ್ಲಿಯೂ ಕೂಡ ಭಾರತದಲ್ಲಿದ್ದಿರಬೇಕು. ಅದನ್ನರಿತು ಬುದ್ಧ ಭಗವಾನರು ಜನತೆಗೆ ಎಚ್ಚರಿಕೆ ನೀಡಿದರು.

ಬಹುಂಪಿಚೆ ಸಾಹಿತಿಂಭಾಸಮಾನೋ
ನತಕ್ಕರೋ ಹೋತಿನರೋಪಮತ್ತೋ
ಗೋಪೋವಗಾವೋ ಗಣಯಂ ಪರೇಸಜ್
ನ ಭಾಗವಾ ಸಾಮಞ್ಞಸ್ಸ ಹೋತಿ ॥

ಪುಣ್ಯ ಗ್ರಂಥಗಳ ಅನಂತ ವಿಷಯಗಳನ್ನು ಓದಿಕೊಂಡು ಅವುಗಳನ್ನು ಉದಾಹರಿಸುತ್ತಾ ತಾವು ಅದರಂತೆ ನಡೆಯದೆ ಪ್ರಮತ್ತರಾಗಿರುತ್ತಾರೆ. ಅವರು ಅನ್ಯರ ಗೋವುಗಳನ್ನು ಎಣಿಸಿ ಕಾಲ ವ್ಯರ್ಥಮಾಡುವವರಂತೆ. ಅಸಹಜ ಜೀವಿಗಳು. ಯಾರು ಸ್ವಲ್ಪವನ್ನೇ ತಿಳಿದರೂ ಅದರಂತೆ ನಡೆಯುತ್ತಾರೆ,

ಅವರು ಪುಣ್ಯಜೀವಿಗಳಾಗುತ್ತಾರೆಂದು ಅವರಿಗೆ ಜೀವನದಲ್ಲಿ ನಿಜವಾದ ಆನಂದ ದೊರೆಯುವುದೆಂದೂ ತಿಳಿಸುತ್ತಾರೆ. ಮನಸ್ಸು ಮನುಷ್ಯನ ಉನ್ನತಿ ಅವನತಿಗಳೆರಡಕ್ಕೂ ಕಾರಣ. ಅದನ್ನು ಸತ್ಕ್ರಿಯಾ ಪ್ರವೃತ್ತವಾಗಿ ಮಾಡಬೇಕೆಂಬುದೇ ಯಮಕ ವಗ್ಗದ ಸಂದೇಶ.

## ೨. ಅಪ್ಪಮಾದ ವಗ್ಗ

ಮಾನವನು ಎಚ್ಚರ ತಪ್ಪುವುದು ಸ್ವಭಾವ. ಮರವೆ ಯಲ್ಲಿ ಸಿಕ್ಕಿದ ಮನುಷ್ಯ ಅವನತಿ ಹೊಂದುತ್ತಾನೆ. ಪ್ರಕೃತಿಯು ಮನುಷ್ಯನನ್ನು ಸದಾ ಮರವೆಯತ್ತ ಸೆಳೆಯುತ್ತದೆ. ಸಾಧಕರು ಮರವೆಯನ್ನು ಮೀರಿ ಎಚ್ಚರದಿಂದ ನಡೆಯುತ್ತಾರೆ. ಎಚ್ಚರ ತಪ್ಪಿದ ಮಾನವನ ಪ್ರವೃತ್ತಿಯನ್ನು ಬುದ್ಧ ಭಗವಾನರು ಇಲ್ಲಿ ಪರಿಶೀಲಿಸಿದ್ದಾರೆ. ಎಚ್ಚರಿಕೆಯಿಂದಿರುವ ಮನುಷ್ಯನಿಗೆ ಅಮರತ್ವ ಪ್ರಾಪ್ತಿಯಾಗುವುದು. ಎಚ್ಚರ ತಪ್ಪಿದವರು ಮೃತ್ಯುವಿಗೆ ತುತ್ತಾಗುವರೆನ್ನುತ್ತಾರೆ.

"ಅಪ್ಪಮಾದೋ ಅಮತಪದಂ ।
ಪಮಾದೋ ಮಚ್ಚುನೋ ಪದಂ" ॥

ಎಚ್ಚರದಿಂದಿರುವ ಸಾಧಕರು ಪ್ರಜ್ಞಾವಂತರಾಗಿ ಧ್ಯಾನಾಸಕ್ತರಾಗಿ, ಧರ್ಮ ಜೀವಿಗಳಾಗಿ ಶ್ರೇಯೋಮಾರ್ಗಾವಲಂಬಿಗಳಾಗಿ ನಿರ್ವಾಣ ಪದವಿಯನ್ನು ಹೊಂದು

ತ್ತಾರೆ. ಎಚ್ಚರ ತಪ್ಪಿದವನ ಹೃದಯದಲ್ಲಿ ಕಾಮ ಕ್ರೋಧಾ ದಿಗಳು ಮನೆಮಾಡುತ್ತವೆ. ಸನ್ಯಾಸಿಯಾದವರೂ ಸದಾ ಎಚ್ಚರದಿಂದಿರಬೇಕು.ಎಚ್ಚರಿಕೆಯಲ್ಲಿ ಆನಂದವನ್ನೂ, ಎಚ್ಚರ ತಪ್ಪಿದಲ್ಲಿ ಭೀತಿಯನ್ನೂ ಅನುಭವಿಸುತ್ತೇವೆ. ಸನ್ಯಾಸಿ ಯಾದರೂ ಎಚ್ಚರಿಕೆಯಿಂದ ನಡೆದೇ ನಿರ್ವಾಣವನ್ನ ಹೊಂದಬೇಕು, ಎಂದು ಎರಡನೆಯದಾದ ಅಪ್ಪಮಾದ ವಗ್ಗದಲ್ಲಿ ಹೇಳಿದೆ.

## ೩. ಚಿತ್ತವಗ್ಗ

ಮಾನವನನ್ನು ಕಾರ್ಯ ಪ್ರವೃತ್ತನಾಗಿ ಮಾಡುವ ಶಕ್ತಿ ಚಿತ್ತಿಗೆ ಸೇರಿದ್ದು. ಚಿತ್ ಯಾವ ರೀತಿ ನಡೆಸುವುದೋ ಅಥವಾ ಪ್ರೇರಿಸುವುದೋ ಅದರಂತೆ ಅವನು ನಡೆಯುತ್ತಾನೆ. ಅದರ ವೃತ್ತಿ ಅನಂತರೂಪವಾದುದು. ವೃತ್ತಿಯೇ ಅದರ ಗುಣ. ವೃತ್ತಿಯನ್ನು ವಿರೋಧಿಸಿ ಜಯಗಳಿಸಿದವರು ಮೋಕ್ಷ ವನ್ನು ಗಳಿಸುವರೆಂದೇ ಭಾರತೀಯ ದರ್ಶನಶಾಸ್ತ್ರಗಳ ಸಂದೇಶ. ಪಾತಂಜಲ ಮಹರ್ಷಿಗಳು "ಯೋಗಶ್ಚಿತ್ತವೃತ್ತಿ ನಿರೋಧಃ" ಎಂದಿದ್ದಾರೆ.

ಚಂಚಲ ಸ್ವಭಾವವೇ ಚಿತ್ತದ ವೃತ್ತಿ. ಚಪಲತೆಯನ್ನು ಗೆಲ್ಲುವುದು ಕಠಿಣ ಸಾಧನ. ಪ್ರಜ್ಞಾಶೀಲರಾದ ಸಾಧಕರು ಕಷ್ಟಗಳನ್ನೆಲ್ಲಾ ಸಹಿಸಿಕೊಂಡು ಚಿತ್ತ ವೃತ್ತಿಗಳನ್ನು ಗೆಲ್ಲು

ತ್ತಾರೆ. ಚಿತ್ತವು ಸ್ಥಿರವಾಗಿದ್ದರೆ ಸದ್ಧರ್ಮದ ಅರಿವುಂಟಾಗುತ್ತದೆ. ಅದರಿಂದ ಮಾನವ ಸತ್ಕರ್ಮಗಳಲ್ಲಿ ಆಸಕ್ತನಾಗುತ್ತಾನೆ. ಅದರಿಂದ ಸುಖವನ್ನು ಅನುಭವಿಸುತ್ತಾನೆ.

ಕುಂಭೂಪಮಜ್‌ಕಾಯಂ ಇಮಜ್‌ವಿದಿತ್ವಾ ।
ನಗರೂಪಮಜ್ ಚಿತ್ತಜ್ ಇದಜ್‌ಠಪೆತ್ವಾ ॥
ಯೋಧೇಥ ಮಾರಜ್ ಪ ಞ್ಞಾವುಧೇನ;
ಜಿತಜ್ ಚರಕ್ಖೇ ಅನಿವೇಸನೋ ಸಿಯಾ ॥

ಅಂದರೆ ಈ ದೇಹ ಒಡೆದು ಹೋಗುವ ಗಡಿಗೆಗೆ ಸಮಾನವಾದುದು. ಈ ಚಿತ್ತಕ್ಕೆ ನಗರಕ್ಕೆ ಸುಭದ್ರವಾದ ಕೋಟೆಯನ್ನು ಕಟ್ಟುವಂತೆ ರಕ್ಷಣೆಯನ್ನು ಕೊಟ್ಟು ಪ್ರಜ್ಞೆಯ ಖಡ್ಗವನ್ನು ಹಿಡಿದು ಚಂಚಲ ಪ್ರವೃತ್ತಿಯೊಡನೆ ಹೋರಾಡಿ ಜಯಗಳಿಸಬೇಕು. ಹಾಗೆ ರಕ್ಷಿತವಾದ ಚಿತ್ತದಿಂದ ಸ್ವಾತಂತ್ರ್ಯವನ್ನು ಪಡೆಯಬಹುದೆಂದು ಚಿತ್ತ ಶುದ್ಧಿಯ ಮಹತ್ವವನ್ನು ಈ ಚಿತ್ತವಗ್ಗದಲ್ಲಿ ಅರುಹಿದ್ದಾರೆ.

## ೪. ಪುಪ್ಫವಗ್ಗ

ಒಳ್ಳೆಯದು ಮತ್ತು ಕೆಟ್ಟದ್ದು, ಕಷ್ಟ ಮತ್ತು ಸುಖ ಇರುವುದು ಈ ಲೋಕದಲ್ಲಿಯೇ. ಇಲ್ಲಿರುವ ಮಾನವ ಶ್ರೇಷ್ಠ ಹೂವಾಡಿಗನಂತಾಗಬೇಕು. ಒಳ್ಳೆಯದನ್ನೇ ಅಂದರೆ ಸದ್ಧರ್ಮವೆಂಬ ಪುಷ್ಪಗಳನ್ನೇ ಜೀವನ ನಂದನದಲ್ಲಿ

ಆರಿಸಿ ಸುಂದರವಾದ ಹೂಮಾಲೆ ತಯಾರಿಸಬೇಕು. ಜೀವನದ ಸಾಧನೆಯ ಫಲಗಳೆಲ್ಲಾ ಪರಿಮಳಯುತವಾದ ಕುಸುಮಗಳಾಗಬೇಕೆಂದು ಈ ವರ್ಗದಲ್ಲಿ ಸೂಚಿಸಿದೆ.

ಇದು ದೇವತೆಗಳನ್ನೂ ಮಾನವರನ್ನೂ ಕಾಣುವಂತಹ ಜಗತ್ತು. ಮಾನವನು ತನ್ನ ಕ್ರಿಯೆಯಲ್ಲಿ ಸದ್ವಿಷಯಗಳನ್ನೂ ಸಂಗ್ರಹಿಸಲು ಉದ್ಯುಕ್ತನಾಗಬೇಕು. ದೇಹವು ಸಮುದ್ರದ ನೊರೆಗೆ ಸಮಾನವಾದುದು. ಅದರ ವೃತ್ತಿ ಭ್ರಮಾತ್ಮಕವಾದದ್ದು. ಅದು ಕಾಮದ ಕೂಪಕ್ಕೆ ಮನುಷ್ಯನನ್ನು ಸೆಳೆಯುತ್ತದೆ. ಈ ಸೆಳೆತದಿಂದ ತಪ್ಪಿಸಿಕೊಳ್ಳಲು ಚಿತ್ತೈಕಾಗ್ರತೆಬೇಕು. ಕುಸುಮಗಳಿಂದ ಪರಿಮಳವನ್ನು ಆರಿಸುವ ದುಂಬಿ ಕುಸುಮಗಳ ಸೌಂದರ್ಯವನ್ನು ಕೆಡಿಸುವುದಿಲ್ಲ. ಮಾನವನು ಅಂತೆಯೇ ಲೋಕಕಂಟಕನಾಗದೆ ಸದ್ವಿಷಯ ಸುಖಗಳನ್ನು ಅನುಭವಿಸುವ ಜಾಣನಾಗಬೇಕು. ನಡೆನುಡಿ ಒಂದಾಗದವನ ಬಾಳು ನಿರ್ಗಂಧಕುಸುಮ. ನಡೆನುಡಿ ಒಂದಾದವನ ಬದುಕು ಸುಂದರವೂ ಪರಿಮಳಯುಕ್ತವೂ ಆದ ಕುಸುಮದಂತೆ ಶ್ರೇಷ್ಠ. ಮರ್ತ್ಯದಲ್ಲಿ ಹುಟ್ಟಿದ ಮಾನವರು ಜೀವನದುದ್ದಕ್ಕೂ ಸತ್ಕಾರ್ಯಗಳನ್ನು ಮಾಡಬೇಕು. ಸತ್ಕಾರ್ಯನಿರತನಾದವನ ಶೀಲವು ಸರ್ವವ್ಯಾಪಿಯಾಗುವುದು. ಶೀಲವು ಮಹತ್ವವಾದುದು. ಶೀಲಸಂಪನ್ನನಾಗಿ ಜಾಗೃತನಾಗಿ ಸುಜ್ಞಾನ ಪ್ರವೃತ್ತನಾದವನನ್ನು ಯಾವ ಬಂಧನವೂ ಬಂಧಿಸಲಾರದು. ಕಸದ ರಾಶಿಯ ಮೇಲೆ

ಸುಗಂಧಪೂರಿತವಾದ ಕಮಲವು ಉದಿಸುವಂತೆ ಅಜ್ಞಾನಿಗಳ ಗುಂಪಿನಲ್ಲಿಯೂ ಸಹ ಪ್ರಜ್ಞಾವಂತನಾದ ಮಾನವನು ಬೆಳೆದುಬೆಳಗಬೇಕು ಎಂದು ಹೇಳಿದ್ದಾರೆ. ಜೀವನಕ್ಕೆ ಮಾರ್ಗ ದರ್ಶನ ಮಾಡಲು ಪುಷ್ಪದ ಉದಾಹರಣೆಯನ್ನು ಬಳಸಿ ಕೊಂಡು ಧರ್ಮೋಪದೇಶ ಮಾಡಿದ್ದಾರೆ ಈ ಪುಷ್ಪವಗ್ಗದಲ್ಲಿ.

## ೫. ಬಾಲವಗ್ಗ

ಮಾನವನ ಜೀವನ ಮುಗ್ಧಲೀಲೆ. ಇದರಿಂದ ಮುಂದೆ ಹೋಗಿ ಜೀವನವನ್ನು ಅರಿಯಬೇಕು. ನನ್ನ ಮನೆ, ನನ್ನ ಮಕ್ಕಳು, ನನ್ನ ಧನವೆಂಬ ಮೋಹದಲ್ಲಿ ಸಿಲುಕಿದ ಮನುಜ ಮೂರ್ಖನಾಗುತ್ತಾನೆ. ಅವನು ಯಾರೆಂದು ಅರ್ಥಮಾಡಿ ಕೊಳ್ಳದೆ ಮಕ್ಕಳು ಮನೆ ನನ್ನದೆಂಬ ಭ್ರಾಂತಿಯಲ್ಲಿದ್ದಾನೆ ಮಾನವ.

ಅತ್ತಾಹಿ ಅತ್ತನೋನತ್ಥಿ। ಕುತೋಪುತ್ತಾ? ಕುತೋಧನಂ ॥

ಅವನೇ ಅವನಲ್ಲ. ಅವನಿಗೆಲ್ಲಿದೆ ನನ್ನ ಮಕ್ಕಳು ನನ್ನ ಸಂಪತ್ತು ಎಂದು ಹೇಳಿಕೊಳ್ಳುವ ಅಧಿಕಾರ. ಮಾನವನು ತಾನು ಎಷ್ಟು ಮೂರ್ಖನೆಂದು ತಿಳಿದುಕೊಂಡಿರುವನೋ ಅಷ್ಟರ ಮಟ್ಟಿಗೆ ಜಾಣ. ತಾನು ಜಾಣನೆಂದು ತಿಳಿದಿರು ವಷ್ಟು ಮೂರ್ಖ. ಮೂರ್ಖನು ಸದಾ ಪಾಪ ಮಾರ್ಗ ವನ್ನು ಅವಲಂಬಿಸಿ ಕೊನೆಯಲ್ಲಿ ಅದರ ಕಹಿಯುಂಡು ದೀರ್ಘ ತಾಪಕ್ಕೆ ತುತ್ತಾಗುತ್ತಾನೆ. ಪ್ರಾಪಂಚಿಕ ಸುಖವನ್ನೇ

ಆನಂದವೆಂದು ತಿಳಿವವನು ಮೂರ್ಖ. ಸಮಾಜದಲ್ಲಿ ಸನ್ಮಾನ ಎಲ್ಲದರಲ್ಲೂ ತನಗೇ ಅಗ್ರಪೂಜೆಬೇಕೆಂದು ಅಪೇಕ್ಷಿಸುವುದು ಮೂರ್ಖತನ. ನಿರ್ವಾಣ ಮಾರ್ಗವನ್ನು ಅರಿತು ಆಚರಿಸುವವರು ಜ್ಞಾನಿಗಳೆನಿಸುತ್ತಾರೆ. ಮಾನವರು ಲೌಕಿಕದಿಂದ ವಿಮುಕ್ತರಾಗಿ ನಿರ್ವಾಣವನ್ನು ಹೊಂದಲು ಯತ್ನಿಸಬೇಕೆಂದು ಈ ಬಾಲವಗ್ಗದಲ್ಲಿ ಸೂಚಿಸಿದೆ.

## ೬. ಪಂಡಿತ ವಗ್ಗ

ನಮ್ಮ ತಪ್ಪು ತೋರಿಸುವವರಲ್ಲಿ ಶ್ರದ್ಧೆಬೇಕು. ವಿಶ್ವಾಸಬೇಕು. ಆದರಿಂದ ನಮ್ಮ ಶ್ರೇಯಸ್ಸು. ಅನ್ಯರ ಪ್ರಶಂಸೆಗೆ ಪಾತ್ರರಾದವನು ತಪ್ಪು ದಾರಿ ಹಿಡಿದು ಕೆಡುತ್ತಾನೆ. ನಮ್ಮ ಹಿತವನ್ನು ಬಯಸಿ ನಮ್ಮ ತಪ್ಪುಗಳನ್ನು ತಿದ್ದುವ ಪಂಡಿತರು ನಮ್ಮನ್ನು ಉದ್ಧರಿಸುವವರು. ಅವರ ಸ್ನೇಹ ಯಾವಾಗಲೂ ಒಳ್ಳೆಯದು. ನಮ್ಮ ಅಭ್ಯುದಯಕ್ಕೆ ನಾವು ಪಂಡಿತರ ಸ್ನೇಹ ಪಡೆಯಬೇಕು. ಅವರು ಯಾರೆಂದರೆ

ನ ಅತ್ತಹೇತುನ ಪರಸ್ಸಹೇತು ।
ನ ಪುತ್ತಂ ಇಚ್ಛೆ ನ ಧನಞ್ ನರಟ್ಠಞ್ ।
ನ ಇಚ್ಛೆಯ್ಯಾ ಧಮ್ಮೇನ ಸಮಿದ್ಧಿಂ ಅತ್ತನೋ ।
ನ ಸೀಲವಾ ಪಞ್ಞವಾ ಧಮ್ಮಿಕೋಸಿಯಾ ॥

ತನಗಾಗಲಿ ಪರರಿಗಾಗಲಿ ಮಕ್ಕಳು, ಐಶ್ವರ್ಯ. ರಾಜ್ಯವನ್ನು ಬಯಸದವನರು, ಅನ್ಯಾಯಮಾರ್ಗದಿಂದ ತನ್ನ

ಅಭ್ಯುದಯವನ್ನು ಬಯಸುವವರು ಶೀಲವಂತರೂ, ಪ್ರಜ್ಞಾವಂತರೂ, ಧರ್ಮಪರಾಯಣರೂ ಆಗಿರುತ್ತಾರೆ. ಅವರು ಮಾತ್ರ ಈ ಸಂಸಾರಸಾಗರವನ್ನು ದಾಟಿ ಬೋಧಿ ಸತ್ವದಲ್ಲಿ ಮನವೆಳಸಿ ಈ ಜನ್ಮದಲ್ಲಿಯೇ ಪರಿನಿರ್ವಾಣವನ್ನು ಹೊಂದುತ್ತಾರೆಂಬುದು ಈ ಪಂಡಿತವಗ್ಗದ ಸಂದೇಶ.

## ೭. ಅರಹಂತ ವಗ್ಗ

ಮಾನವ ತನ್ನ ಪ್ರಯತ್ನದಿಂದ ಕಾಮ ಕ್ಲೇಶಗಳನ್ನು ಕಳೆದುಕೊಂಡು, ಸಂಗ್ರಹದಲ್ಲಿ ನಿರಾಸಕ್ತರಾಗಿ ಅನ್ನ ಪಾಪಲ್ಯಕ್ಕೆ ತುತ್ತಾಗದೆ, ಇಂದ್ರಿಯನಿಗ್ರಹ ಮಾಡಿಕೊಂಡು, ತನ್ನ ನಿರ್ವಾಣಸಾಧನೆಯಲ್ಲಿ ನಿಷ್ಠೆಯುಳ್ಳವನಾಗಿ, ಅಂಧಾನುಕರಣೆಯ ಬಂಧನವನ್ನು ತೊರೆದು ಆಸೆಗಳಲ್ಲಿ ಮನವೆಳಸದೆ ಗ್ರಾಮವಾಗಲೀ, ಅರಣ್ಯವಾಗಲಿ, ಗಿರಿಗಹ್ವರಂಗಳಾಗಲಿ ನಿರ್ಭೀತನಾಗಿ ಆನಂದದಿಂದ ವಾಸಿಸುವ ಸಮರ್ಥರು ಅರ್ಹವಂತರು. ನಿತ್ಯಾನಂದವನ್ನು ಹೊಂದಬಲ್ಲ ಪೂಜ್ಯಪದವಿಯನ್ನು ಪಡೆವವರು ಎಂದು ಈ ಅರಹಂತ ವಗ್ಗದ ನಿರ್ದೇಶನ.

## ೮. ಸಹಸ್ಸ ವಗ್ಗ

ಮಾತಿಗಿಂತ ಕೃತಿ ಮೇಲು. ಅಪಾರ ಪದ ಪುಂಜಕ್ಕಿಂತ ಅಂದರೆ ಅರ್ಥವಿಲ್ಲದ ನೂರಾರು ಪದಗಳನ್ನು ಪದ ಸಮುಚ್ಚಯದ ವಾಕ್ಯಗಳನ್ನೂ ಒಳಗೊಂಡ ಬಹುನುಡಿಗಿಂತ ಶಾಂತಿ

ಮನ್ನು ನೀಡುವ ಅರ್ಥವಾದ ಒಂದು ನುಡಿ ಲೇಸು. ಸಾವಿರ ಜನರನ್ನು ಕೊಲ್ಲುವ ಶೌರ್ಯಕ್ಕಿಂತ ತನ್ನನ್ನು ಗೆಲ್ಲುವ ಶೌರ್ಯ ಲೇಸು. ಸಾವಿರ ಯಾಗಕ್ಕಿಂತ ಒಬ್ಬ ಸದ್ಭಾವಿತನ ಪೂಜೆ ಲೇಸು. ಶೀಲವಿಲ್ಲದ ಇಂದ್ರಿಯ ನಿಗ್ರಹವಿಲ್ಲದ ನೂರು ವರ್ಷದ ಬಾಳಿಗಿಂತ ಶೀಲವಂತನಾದ ಧ್ಯಾನಿಯ ಒಂದು ದಿನದ ಬದುಕು ಶ್ರೇಷ್ಠ. ಕರ್ತವ್ಯನಿಷ್ಠನಾಗಿ, ನಿರ್ವಾಣ ಮಾರ್ಗಾಭಿಲಾಷಿಯಾಗಿ ಬಾಳುವ ಒಂದು ದಿನವೇ ಜೀವನ ದಲ್ಲಿ ಶ್ರೇಷ್ಠ ಎಂದಿದೆ ಈ ಸಹಸ್ಸವಗ್ಗದಲ್ಲಿ.

## ೯. ಪಾಪವಗ್ಗ

ಪಾಪ ಪ್ರವೃತ್ತಿಯೇ ದುಃಖಕಾರಣ. ಒಮ್ಮೆ ಪಾಪ ಮಾಡಲು ಉದ್ಯುಕ್ತನಾದರೆ ಅವನ ಪ್ರವೃತ್ತಿ ಅದರಲ್ಲಿಯೇ ತೊಡಗಿ ಹನಿಹನಿಯಾಗಿ ಬಂದ ನೀರು ಸಾಗರವಾಗುವಂತೆ ಪಾಪರಾಶಿ ಬೆಳೆಯುತ್ತದೆ. ಜೀವನದಲ್ಲಿ ಆಶೆಯಿರುವವರು ವಿಷವನ್ನು ತ್ಯಜಿಸುವಂತೆ ಪಾಪವನ್ನು ಬಿಡಬೇಕು. ಪಾಪಿ ಯಾದವನು ಗಗನದಲ್ಲಿರಲಿ, ಸಾಗರದ ಮಧ್ಯದಲ್ಲಿರಲಿ, ಪರ್ವತದ ಗರ್ಭದಲ್ಲಿರಲಿ ಅದರ ದುಷ್ಫಲದ ಅನುಭವ ವನ್ನು ತಪ್ಪಿಸಿಕೊಳ್ಳಲಾರನು. ದುಃಖದಿಂದ ತಪ್ತನಾಗಿ ಅವನು ನಿರ್ವಾಣವನ್ನು ಕಾಣಲಾರದವನಾಗುತ್ತಾನೆ. ಮೃತ್ಯುವಿಗೆ ತುತ್ತಾಗಿ ದೀರ್ಘ ಪರಿತಾಪಕ್ಕೆ ಒಳಗಾಗುತ್ತಾನೆ. ಆದುದರಿಂದ ನಾವು ಅನ್ಯರ ಕಲ್ಯಾಣವನ್ನು ಮಾಡುವುದ ರಲ್ಲಿ ನಿರತರಾಗಬೇಕು. ಅದರಿಂದ ಪಾಪದ ನಿವಾರಣೆಯಾಗು

ತ್ತದೆ. ಇದರಲ್ಲಿ ಉದಾಸೀನನಾದರೆ ಮನಸ್ಸು ಪಾಪ ಕಾರ್ಯದಲ್ಲಿ ಪ್ರವೃತ್ತವಾಗುತ್ತದೆಂಬುದೇ ಈ ಪಾಪವಗ್ಗದ ಸಂದೇಶ.

## ೧೦. ದಂಡವಗ್ಗ

ಶಿಕ್ಷೆಗೆ ಎಲ್ಲರೂ ಹೆದರುತ್ತಾರೆ. ಅಂತೆಯೇ ಮೃತ್ಯುವನ್ನು ಯಾರೂ ಅಪೇಕ್ಷಿಸುವುದಿಲ್ಲ. ಆದರೆ ಅನ್ಯರನ್ನು ದಂಡಿಸುವಾಗ ತನ್ನಂತೆ ಅನ್ಯರನ್ನು ಕಾಣುವುದಿಲ್ಲ. ದಂಡಿಸುವುದರಿಂದ ತನಗಾದಂತೆ ಮತ್ತೊಬ್ಬರಿಗೂ ನೋವಾಗುವುದೆಂದು ತಿಳಿಯುವುದಿಲ್ಲ. ತಾನು ಸುಖವನ್ನು ಬಯಸುವಂತೆ ಅನ್ಯರ ಸುಖವನ್ನು ಆಶಿಸುವುದಿಲ್ಲ. ತನ್ನಂತೆ ಪರರನ್ನು ಬಗೆಯದವರು ಅವರನ್ನು ನಡೆ ನುಡಿಯಿಂದಲಾಗಲಿ ಹಿಂಸೆ ಮಾಡುವವರು ನಿರ್ವಾಣವನ್ನು ಹೊಂದುವುದಿಲ್ಲ. ತಪ್ಪಿಲ್ಲದವನನ್ನು ಶಿಕ್ಷಿಸುವುದು ಅಥವಾ ಯಾವುದೇ ರೀತಿಯಿಂದ ನೋಯಿಸುವುದು ಪಾಪಕರ. ಅಂಥವನು ಅಪಾರ ನೋವನ್ನೋ, ಹಾನಿಯನ್ನೋ, ಶರೀರ ಛೇದನವನ್ನೋ, ರೋಗವನ್ನೋ, ಹುಚ್ಚನ್ನೋ, ರಾಜನಿಂದ ಶಿಕ್ಷೆಯನ್ನೋ ಅನುಭವಿಸುತ್ತಾನೆ. ದಾರುಣವಾದ ದೂಷಣೆಗಳಿಗೆ ಒಳಗಾಗುತ್ತಾನೆ. ತನ್ನ ಬಂಧುಗಳ ಸಾವನ್ನೋ ತನ್ನ ಭಾಗ್ಯದ ನಾಶವನ್ನೋ, ತನ್ನ ಮನೆಯು ಅಗ್ನಿಗೆ ಆಹುತಿಯಾಗುವದನ್ನೋ ನೋಡುತ್ತಾನೆ. ಅವನು ನರಕದಲ್ಲಿ ಮತ್ತೆ ಹುಟ್ಟುತ್ತಾನೆ ಎಂದು ಅಹಿಂಸಾವಾದವನ್ನು ಪ್ರತಿಪಾದಿಸಿದ್ದಾರೆ.

ಸಮಾಜದಲ್ಲಿನ ಅರ್ಥಹೀನ ಆಚರಣೆಗಳು ಮಾನವನ ಅಭ್ಯುದಯಕ್ಕೆ ಅಡ್ಡಿಯೆಂಬುದನ್ನು ಸೂಚಿಸುತ್ತಾರೆ.

ನ ನಗ್ಗಚರಿಯಾ, ನಜಟಾ, ನ ಪಂಕ
ನಾನಾಸಕಾ ಥಂಡಿಲಸಾಯಿಕಾ ವಾ
ರಜೋ ಚಜಲ್ಲಂ ಉಕ್ಕುಟಿಕಪ್ಪಧನಂ
ಸೋಧೆಂತಿ ಮಚ್ಚಂ ಅವಿತಿಣ್ಣಕಂಖಂ ॥

ನಗ್ನನಾಗಿ ಸಂಚರಿಸುವುದು, ಜಟೆಯನ್ನು ಧರಿಸಿರುವುದು, ಕೆಸರಿನಲ್ಲಿ ಒದ್ದಾಡುವುದು, ಉಪವಾಸ ಮಾಡುವುದು, ನೆಲದ ಮೇಲೆ ಮಲಗುವುದು, ಭಸ್ಮವನ್ನು ಬಳಿದುಕೊಳ್ಳುವುದು ಪದ್ಮಾಸನ ಹಾಕುವುದು ಮುಂತಾದ ಬರಿಯ ಡಾಂಭಿಕ ಆಚಾರಗಳಿಂದ ಸಂಶಯಾತ್ಮಕವಾದ ವಿಷಯ ತುಂಬಿದ ಮಾನವನ ಅಂತರಂಗ ಶುದ್ಧವಾಗದು.

ಅಲಂಕಾರವಿದ್ದರೂ ಹಿಗ್ಗದೆ, ಕುಗ್ಗದೆ ಸಮಭಾವದಿಂದಿರುವವನು, ಶಾಂತಚಿತ್ತನು, ಬ್ರಹ್ಮಚರ್ಯ ಪಾಲಕನು, ಸತ್ಕಾರ್ಯನಿರತನು, ಸರ್ವಜೀವಿಗಳಲ್ಲಿ ದಯೆಯುಳ್ಳವನು ನಿಜವಾದ ಬ್ರಾಹ್ಮಣ ಶ್ರಮಣ ಮತ್ತು ಭಿಕ್ಷು ಎನಿಸುತ್ತಾನೆ. ನಮ್ಮಲ್ಲಿ ಸಂವೇಗ, ಶ್ರದ್ಧೆ, ಶೀಲ, ವೀರ್ಯ ರಕ್ಷಣೆ ಸಮಾಧಿ ಸ್ಥಿತಿ, ಸತ್ಯಾನ್ವೇಷಣಾ ಪ್ರವೃತ್ತಿ, ಅರಿತಂತೆ ಆಚರಿಸುವ ಮನೋಧರ್ಮ ಇರಬೇಕು. ಅದರಿಂದ ನಮ್ಮ ದುಃಖದ ಪರಿಹಾರವಾಗುತ್ತದೆ. ನಿರ್ವಾಣ ಪ್ರಾಪ್ತವಾಗುತ್ತದೆ. ಮನು

ಶ್ಯನ ಪ್ರವೃತ್ತಿ ಪ್ರಕೃತಿಗೆ ಸೋಲುವುದು. ಆದರೆ ಪ್ರಕೃತಿಯನ್ನು ಗೆಲ್ಲಬೇಕು. ನೀರಗಂಟಿ ನಿಯತವಾದೆಡೆಗೆ ನೀರು ಹಾಯಿಸುವಂತೆ, ಅಸ್ತ್ರ ವಿದ್ಯಾನಿಪುಣ ತನ್ನ ಬಾಣವನ್ನು ನೇರವಾಗಿ ಪ್ರಯೋಗಿಸುವಂತೆ ಬಡಗಿ ಮರಗಳನ್ನು ಬಗ್ಗಿಸುವಂತೆ ಹರಿದಾಡುವ ಮನಸ್ಸನ್ನು ಹದಗೊಳಿಸಿಕೊಂಡರೆ ನಮ್ಮ ದುಃಖ ನಿವೃತ್ತಿಯಾಗುತ್ತದೆಂದು ಬಿನ್ನವಿಸಿದೆ ಈ ದಂಡವಗ್ಗದಲ್ಲಿ.

## ೧೧. ಜರಾವಗ್ಗ

ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ಈ ಪ್ರಪಂಚದಲ್ಲಿ ಆನಂದವೆಲ್ಲಿದೆ. ಇಲ್ಲಿ ಆನಂದವಿದೆಯೆಂದು ನಂಬಿ ಅಜ್ಞಾನದ ಕತ್ತಲಲ್ಲಿರುವ ನಾವು ಬೆಳಕನ್ನು ಅರಸಬೇಕು. ಈ ದೇಹ ರೋಗರುಜಿನಗಳ ಅಶಾಶ್ವತ ಗೊಂಬೆ. ಇದು ಒಂದು ದಿನ ಒಡೆದುಹೋಗುತ್ತದೆ. ಮರಣವೇ ಇದಕ್ಕೆ ಕೊನೆ. ಮೂಳೆಗಳಿಂದ ಕಟ್ಟಲ್ಪಟ್ಟು ರಕ್ತ ಮಾಂಸಗಳ ಲೇಪನದಿಂದ ನಿಂತಿರುವ ಗೂಡು ಈ ದೇಹ. ಇದರಲ್ಲಿ ಮುಪ್ಪು, ಸಾವು, ಮದ ಮತ್ತು ಮಾತ್ಸರ್ಯಗಳು ತುಂಬಿವೆ. ಇದು ಮುಪ್ಪಿನಿಂದ ಒಸ್ಸವಿಳಿಯುತ್ತದೆ. ಆದರೆ ಧರ್ಮಕ್ಕೆ ಮುಪ್ಪಿಲ್ಲ, ಸಾವಿಲ್ಲ. ಇಂತಹ ಗೂಡನ್ನೇ ಅವಲಂಬಿಸಿ ಪುನಃ ಪುನಃ ಹುಟ್ಟುವುದು ದುಃಖದಾಯಕವಾದುದು. ಆದುದರಿಂದ ನಾವು ಎಚ್ಚರಿಕೆಯಿಂದ ಇರಬೇಕು.

ಗಹಕಾರಕಾ ದಿಟ್ಠೋಸಿ। ಪುನಗೇಹಂ ನಕಾಹಸಿ

ಸಬ್ಬಾತೇ ಫಾಸುಕಾಭಗ್ಗಾ। ಗಹಕೂಟಂ ವಿಸಂಖಿತಂ

ವಿಸಂಖಾರಗತಂ ಚಿತ್ತಂ। ತಣ್ಹಾನಂ ಖಯಮಜ್ಝ

ಗಾ ॥

ಎಲೈ ಗೃಹನಿರ್ಮಾಣಕನೇ ಮನೆ ಕಟ್ಟಿ ಅದರಲ್ಲಿಯೇ ನೀನು ಸಿಕ್ಕಿ ಬಿದ್ದಿದ್ದೀಯೆ. ಒಮ್ಮೆ ಸಿಕ್ಕಿಬಿದ್ದ ಮೇಲೆ ನೀನು ಅದರಿಂದ ಹೊರಬಂದು ಮತ್ತೊಂದು ಮನೆಯನ್ನು ಕಟ್ಟಲಾರೆ. ಅದರ ಛಾವಣಿಯ ಮರಗಳೆಲ್ಲಾ ಮುರಿದು ಹೋಗಿವೆ. ಕಂಬ ಸಿಂಭೆಗಳೆಲ್ಲಾ ಚೂರುಚೂರಾಗಿವೆ. ಆದುದರಿಂದ ಚಿತ್ತವು ನಿರ್ವಾಣದಲ್ಲಿ ನಿಂತು ಎಲ್ಲ ರೀತಿಯ ಆಳಿವನ್ನು ಮೀರಿ ನಿಂತಿದೆ. ಮತ್ತೆ ಮತ್ತೆ ಗೂಡಿನಲ್ಲಿ ಸಿಕ್ಕಿಸುವ ತೃಷ್ಣೆಯನ್ನು ನೀಗಿಕೊಂಡಿದೆ. ಇದು ಜನರಿಗೆ ಬುದ್ಧ ಭಗವಾನರು ನೀಡಿದ ಅತ್ಯುತ್ತಮ ಎಚ್ಚರಿಕೆ, ಶ್ರೇಷ್ಠ ಮಾರ್ಗದರ್ಶನ. ಮಾನವಪ್ರವೃತ್ತಿ ಅಶಾಶ್ವಂಖಿಲೆಯಲ್ಲಿ ಸಿಕ್ಕಿ ದುಃಖದಲ್ಲಿ ಪುನರಾವೃತವಾಗುತ್ತಿರುವುದನ್ನು ಸುಂದರವಾದ ಉದಾಹರಣೆಯಿಂದ ಸೂಚಿಸಿದ್ದಾರೆ. ಬ್ರಹ್ಮಚರ್ಯ ಪಾಲನೆ ಮತ್ತು ಯೌವ್ವನದಲ್ಲಿ ಜ್ಞಾನನಿಧಿ ಸಂಪಾದನೆ ದುಃಖ ನಿವಾರಣೆಗೆ ಅತಿಮುಖ್ಯವೆಂದು ಈ ವಗ್ಗದಲ್ಲಿ ಚಿತ್ರಿಸಿದ್ದಾರೆ.

## ೧೨. ಅತ್ತವಗ್ಗ

ಈ ವರ್ಗದಲ್ಲಿ ಜನರಿಗೆ ಆತ್ಮದಲ್ಲಿ ಅಂದರೆ ತನ್ನಲ್ಲಿ ಇರುವ ಪ್ರೀತಿಯನ್ನು, ಪ್ರೀತಿ ಇರಬೇಕಾದ ರೀತಿಯನ್ನೂ

ವಿಧಿಸಿದೆ. ತನ್ನಂತೆ ಇತರರನ್ನು ಕಾಣಬೇಕು. ತಾನು ನುಡಿದಂತೆ ನಡೆಯಬೇಕು. ತನ್ನ ಮಾನಸಿಕ ವೃತ್ತಿಯನ್ನು ದಮನಮಾಡಿಕೊಂಡರೆ ಜಗತ್ತಿನಲ್ಲಿ ಎಲ್ಲರೂ ಒಳ್ಳೆಯವರಾಗುತ್ತಾರೆ. ವಜ್ರವು ಕಠಿಣವಾದ ರತ್ನವನ್ನು ಚೂರು ಮಾಡುವಂತೆ ತಾನು ಮಾಡುವ ಪಾಪವು ತನ್ನನ್ನು ಚೂರು ಮಾಡುತ್ತದೆ. ಅನ್ಯಾಯವಾದುದನ್ನು ಮತ್ತು ಅಹಿತವಾದುದನ್ನು ಮಾಡುವುದು ಸುಲಭ. ಆದರೆ ಹಿತವಾದುದನ್ನು ಮತ್ತು ಸಾಧುವಾದುದನ್ನು ಮಾಡುವುದು ಕಷ್ಟ. ಧರ್ಮ ಬೋಧೆಯನ್ನು ಅಲ್ಲಗಳೆಯುವವರು ಮೂರ್ಖರಾಗಿ ಬಿದಿರು ಮೆಳೆಯು ಬೆಳೆದು ತನ್ನಿಂದ ತಾನೇ ಹತ್ತಿ ಉರಿದು ಭಗ್ನವಾಗುವಂತೆ ನಾಶವಾಗುತ್ತಾರೆ. ಪಾಪ ಮಾಡುವುದರಿಂದ ಮಾನವ ತನ್ನ ನಾಶವನ್ನು ತಾನೇ ಮಾಡಿಕೊಳ್ಳುತ್ತಾನೆ. ಪಾಪ ಮಾಡದಿರುವವನು ತನ್ನ ಅಭ್ಯುದಯವನ್ನು ತಾನೇ ಸಾಧಿಸುತ್ತಾನೆ. ಉನ್ನತಿ ಮತ್ತು ಅವನತಿಗಳು ಮಾನವನ ಕರ್ತವ್ಯಶಕ್ತಿಯನ್ನು ಅವಲಂಬಿಸಿದೆ. ಅವನನ್ನು ಬೇರೊಬ್ಬರು ಉದ್ಧರಿಸಲಾರರು. ದಾಕ್ಷಿಣ್ಯಕ್ಕಾಗಿ ತನ್ನ ಉನ್ನತಿಯನ್ನು ನಿರ್ಲಕ್ಷಿಸಬಾರದು. ತನ್ನ ಉನ್ನತಿಗಾಗಿ ಅನ್ಯರ ಉನ್ನತಿಯನ್ನು ಬಲಿಗೊಡಬಾರದೆಂದು ಇದೇ ಆತ್ಮೋದ್ಧಾರದ ಸನ್ಮಾರ್ಗವೆಂದೂ ಈ ವಗ್ಗದ ಸಂದೇಶ.

## ೧೩. ಲೋಕ ವಗ್ಗ

ಲೋಕವು ಕ್ಷಣಿಕವಾದದ್ದು. ಮಾನವನ ಅದರ ಗೊಂದಲ

ದಲ್ಲಿ ಸಿಲುಕಿ ಅಂತಹ ಕ್ಷಣಿಕವಾದುದನ್ನೇ ನಂಬಿ ಕೆಡುತ್ತಾನೆ. ಅವನಿಗೆ ಧರ್ಮದ ಅರಿವಿಲ್ಲದೆ ಹಾಳಾಗುತ್ತಾನೆ. ಆದುದರಿಂದ ಈ ಲೋಕದ ಧರ್ಮದ ಆಚರಣೆಯಲ್ಲಿ ನಿಷ್ಠೆಯಿದ್ದರೆ ಈ ಲೋಕದಲ್ಲೂ ಪರಲೋಕದಲ್ಲೂ ಸುಖಿಯಾಗುತ್ತಾನೆ. ಲೋಕವನ್ನು ನೀರುಗುಳ್ಳೆಯಂತೆ ಅಥವಾ ಮರೀಚಿಕೆಯಂತೆ ಭಾವಿಸಬೇಕು. ಲೋಕದಲ್ಲಿ ಹುಟ್ಟಿದಾಗ ನಾವು ಎಚ್ಚರತಪ್ಪುವುದು ಸ್ವಭಾವ. ಆದರೆ ಅನಂತರವಾದರೂ ಎಚ್ಚರಿಕೆಯಿಂದ ಧರ್ಮಪಥದಲ್ಲಿ ನಡೆದರೆ ಸುಖ ದೊರೆಯುತ್ತದೆ. ಈ ಜಗತ್ತು ಮಾನವನನ್ನು ಬಳಲಿಸುವುದಕ್ಕಾಗಿ ನಿರ್ಮಿತವಾದ ಬಲೆ. ನಮ್ಮ ಆಚರಣೆಯಿಂದ ಇದಕ್ಕೆ ಸಿಲುಕದೆ ಪಾರಾಗಬೇಕು. ಜಿಪುಣರಾಗಿ ಬಾಳುವವರು ಮೂರ್ಖರು. ದಾನಶೀಲರು ಧೀರರು. ಮತ್ತು ಅವರಿಗೆ ನಿಜವಾದ ಆನಂದ ಲಭಿಸುವುದು. ಅಂತಹ ಆನಂದವನ್ನು ಗಳಿಸಲು ಮಾನವರು ಯತ್ನಮಾಡಬೇಕು ಎಂದಿದ್ದಾರೆ. ಇದರಲ್ಲಿ ಲೋಕವನ್ನು ನಿರುಪಯುಕ್ತವೆಂದು ಕರೆಯುವುದಿಲ್ಲ. ಲೋಕದ ಜಂಝಡವೇ ಆನಂದವೆಂದು ಕ್ಷಣಿಕ ಸುಖಕ್ಕೆ ಮಾರುಹೋಗದಂತೆ ನಾವು ಎಚ್ಚರದಿಂದಿರಲು ಇದು ಉತ್ತಮ ಕ್ಷೇತ್ರ. ಇಲ್ಲಿ ಧರ್ಮಪಥದಲ್ಲಿ ನಡೆದರೆ ಜೀವನದ ದುಃಖಗಳನ್ನು ನೀಗಿ ನಿತ್ಯಾನಂದವನ್ನು ಹೊಂದುವುದು ಸಾಧ್ಯ ಎಂದು ಎಚ್ಚರಿಸಿದ್ದಾರೆ.

## ೧೪. ಬುದ್ಧ ವಗ್ಗ

ಲೋಕದ ಸಂಕಟಗಳಿಗೆ ಮಾನವರಲ್ಲಿರುವ ತೃಷ್ಣೆ

ಆದರೆ ಆಶೆಯೇ ಕಾರಣ. ಆಶೆಯನ್ನು ಬಿಟ್ಟವನು ಬುದ್ಧನಾಗಬಹುದು. ಬುದ್ಧ ಎಂಬುದು ಕೇವಲ ಹೆಸರು ಮಾತ್ರವಲ್ಲ. ಅದು ಮಾನವನು ಗಳಿಸುವ ಸಿದ್ಧಿ. ರಾಗ ದ್ವೇಷಗಳನ್ನು ನೀಗಿದವನು, ಧ್ಯಾನನಿರತನು, ನಿರ್ವಾಣದ ಶಾಂತಿಯನ್ನು ಪಡೆಯಲು ಪ್ರಯತ್ನಶೀಲನಾದವನು ಬುದ್ಧನಾಗಬಹುದು. ಮನುಷ್ಯಜನ್ಮ ಲಭಿಸುವುದು, ಮಾನವನಾಗಿ ಬಾಳುವುದು, ಸದ್ಧರ್ಮ ಶ್ರವಣ ಮತ್ತು ಬುದ್ಧತ್ವಪ್ರಾಪ್ತಿ ಇವು ಸುಲಭಸಾಧ್ಯವಾದುವಲ್ಲ. ಆದರೆ ಅದಕ್ಕೆ ಮಾರ್ಗವಿಲ್ಲದೆ ಇಲ್ಲ. ಸರ್ವ ಪಾಪಕೃತ್ಯಗಳನ್ನು ಬಿಡುವುದು ಕುಶಲವನ್ನು ಸಂಪಾದಿಸುವುದು, ಚಿತ್ತಶುದ್ಧಿಯನ್ನು ಪಡೆಯುವುದು ಬುದ್ಧತ್ವ ಸಿದ್ಧಿಯ ವಿಧಿಗಳು. ನಿರ್ವಾಣವನ್ನು ಬಯಸುವವನಿಗೆ ಸಹನೆ ಶಾಂತಿಗಳಿರಬೇಕು. ಇತರರನ್ನು ನಿಂದಿಸದಿರುವುದು, ಯಾವುದೇ ರೀತಿಯಿಂದ ನೋಯಿಸದಿರುವುದು ಭಿಕ್ಷು ಧರ್ಮದಲ್ಲಿ ನಿಷ್ಠೆಯಿಂದಿರುವುದು. ಮಿತಿಯಾಗಿ ಆಹಾರ ಸೇವಿಸುವುದು, ಏಕಾಂತವಾಗಿರುವುದು, ಧ್ಯಾನ ನಿರತನಾಗಿರುವುದು ಇವು ಬುದ್ಧಶಾಸನಗಳು. ಈ ಶಾಸನಗಳಿಗೆ ಬದ್ಧನಾಗಿ ಬುದ್ಧತ್ವಕ್ಕೆ, ಧರ್ಮಕ್ಕೆ, ಸಂಘಕ್ಕೆ ಶರಣಾದವರು ಆನಂದವನ್ನು ಪಡೆಯುವರು. ಸತ್ಪುರುಷರ ಸಹಯೋಗದಿಂದ ಮಾನವಕುಲವೇ ಉದ್ಧಾರವಾಗುತ್ತದೆ. ಎಂದು ಈ ಅಧ್ಯಾಯದಲ್ಲಿ ಬುದ್ಧಧರ್ಮದ ನಿಯಮಗಳನ್ನು ಸೂಚಿಸಿದೆ.

## ೧೫. ಸುಖವಗ್ಗ

ದಯೆಯೇ ಬೌದ್ಧಧರ್ಮದ ಜೀವನಾಡಿ. ಆದುದರಿಂದ ಸುಖವನ್ನು ಕಾಣುವ ರೀತಿಯನ್ನು ಇಲ್ಲಿ ವಿವರಿಸುತ್ತಾರೆ. ವೈರಿಗಳ ನಡುವೆ ಮಿತ್ರನಾಗಿ ಬಾಳುವುದೇ ಸುಖ. ರೋಗಿಗಳ ಮಧ್ಯದಲ್ಲಿದ್ದರೂ ಆರೋಗ್ಯದಿಂದಿರುವುದು ಸುಖ. ಜಿಪುಣರ ಮಧ್ಯೆ ಉದಾರಿಯಾಗಿರುವುದು ಸರ್ವರ ಹಿತವನ್ನೇ ತನ್ನದೆಂದು ಭಾವಿಸುವುದು ಇವುಗಳಲ್ಲಿ ಸುಖವಿದೆ. ಏಕೆಂದರೆ

ನತ್ಥಿ ರಾಗಸಮೋ ಅಗ್ಗಿ ನತ್ಥಿ ದೋಸಸಮೋ ಕಲಿ
ನತ್ಥಿ ಖಂದಾದಸಾದುಕ್ಖಾ ನತ್ಥಿ ಸಂತಿಪರಙ್ ಸುಖಙ್ ॥

ರಾಗಕ್ಕೆ ಸಮನಾದ ಅಗ್ನಿ ಇಲ್ಲ. ದ್ವೇಷಕ್ಕೆ ಸಮನಾದ ತಪ್ಪಿಲ್ಲ. ದುಃಖ ಪ್ರಚೋದನೆಯ ಭಯಕ್ಕಿಂತ ದುಃಖ ಬೇರಿಲ್ಲ. ನಿರ್ವಾಣದಿಂದ ಲಭಿಸುವ ಶಾಂತಿಗಿಂತ ಹೆಚ್ಚಿನ ಸುಖವಿಲ್ಲ. ಎಲ್ಲರಲ್ಲಿ ದಯೆಯಿಂದ ವಿಶ್ವಾಸದಿಂದ ಇದ್ದರೆ ಸುಖ ತಾನಾಗಿ ಬರುತ್ತದೆ. ಮೂರ್ಖರ ಜೊತೆಯಲ್ಲಿ ಸೇರುವುದರಿಂದ ಮಾನವರು ದುಃಖವನ್ನು ಗಳಿಸಿಕೊಂಡು ಅದನ್ನೇ ಬೆಳೆಸಿಕೊಂಡು ಕಷ್ಟಪಡುತ್ತಾರೆ. ಆದರೆ ಉತ್ತಮಸಹವಾಸ ದೊರೆಯಬೇಕಾದರೆ ನಮ್ಮಲ್ಲಿ ಉತ್ತಮಗುಣಗಳಿರಬೇಕು. ಅಥವಾ ಉತ್ತಮಗುಣವಿರುವವರ ಸಂಘವನ್ನು ಸೇರಿ ನಮ್ಮ ಗುಣಗಳನ್ನು ತಿದ್ದಿಕೊಳ್ಳಬೇಕು. ಅದಕ್ಕಾಗಿಯೇ ಸಂಘದ ನಿರ್ಮಾಣವಾಯಿತು. ಅದರ ಶಾಸನಗಳಿಗೆ ಬದ್ಧರಾದವರು

ತಾವೂ ಸುಖವನ್ನು ಅನುಭವಿಸಿ ಅನ್ಯರಿಗೂ ಸುಖವನ್ನು ದೊರಕಿಸುವರೆಂದು ಬುದ್ಧ ಭಗವಾನರ ಸಂದೇಶವನ್ನು ಈ ಅಧ್ಯಾಯದಲ್ಲಿ ವಿವರಿಸಿದೆ.

## ೧೬. ಪಿಯವಗ್ಗ

ಸರ್ವರಲ್ಲಿಯೂ ಪ್ರೀತಿಯಿರಬೇಕು. ಆದರೆ ಪ್ರೀತಿಗೊಂದು ಮಿತಿ ಇರಬೇಕು. ಯಾರಲ್ಲಿ ಹೆಚ್ಚು ಪ್ರೀತಿಯನ್ನಿಟ್ಟರೂ ಅದು ರಾಗಕ್ಕೆ ಪರಿವರ್ತನವಾಗಿ ದುಃಖಕ್ಕೆ ಕಾರಣವಾಗುತ್ತದೆ. ಅನ್ಯರಲ್ಲಿ ಅತಿಪ್ರೀತಿಯಿದ್ದರೆ ಅವರನ್ನು ಅಗಲಿದಾಗ ದುಃಖ ವುಂಟಾಗುತ್ತದೆ. ಅತಿ ಪ್ರೀತಿಯಿಂದ, ರತಿಯಿಂದ, ಕಾಮ ದಿಂದ, ಆಶೆಯಿಂದ ದುಃಖವೂ ಭಯವೂ ಉಂಟಾಗುತ್ತದೆ. ಇವುಗಳಿಂದ ಮುಕ್ತನಾದವನಿಗೆ ಎಂದಿಗೂ ದುಃಖದ ಗೊಡವೆ ಇರುವುದಿಲ್ಲ. ಮತ್ತು ಅವನಿಗೆ ಯಾವ ಭಯವೂ ಇರುವುದಿಲ್ಲ. ಯಾರಲ್ಲಾದರೂ ಪ್ರೀತಿ ಅತಿಯಾದರೆ ಅವನು ಮಾಡುವ ಪಾಪ ಕರ್ಮಗಳಲ್ಲಿ ನಮಗೆ ಮೊದಲು ಸಹನೆಯುಂಟಾಗುತ್ತದೆ. ನಂತರ ನಾವು ಅವರ ಪಾಪಮಾರ್ಗವನ್ನು ಹಿಡಿಯುವ ಸಂಭವವುಂಟು. ಆದುದರಿಂದ ಪ್ರೀತಿಯಿರಬೇಕು. ಆದರೆ ಅದು ಮಿತಿಯಾಗಿರಬೇಕೆಂದು ಈ ಅಧ್ಯಾಯ ಸೂಚಿಸುತ್ತದೆ.

## ೧೭. ಕೋಧವಗ್ಗ

'ಕೋಪವೆಂಬುದತಿಕೆಡುಗು' ಜೀವನದಲ್ಲಿ. ಮನುಷ್ಯನಿಗೆ

ದುಃಖಬರುವುದಕ್ಕೆ ಅಭಿಮಾನವೇ ಕಾರಣ. ಅಭಿಮಾನವನ್ನು ಬಿಟ್ಟಾಗ ಕೋಪ ಉದಯಿಸುವುದಿಲ್ಲ. ನಾಮರೂಪಗಳಿಗೆ ಒಳಗಾಗದಿದ್ದರೆ ಅವನಿಗೆ ದುಃಖ ಬರುವುದಿಲ್ಲ. ನಾಮರೂಪಗಳನ್ನು ಬೌದ್ಧ ಧರ್ಮದಲ್ಲಿ ಪಂಚಖಂಡಗಳು ಎನ್ನುತ್ತಾರೆ. ಇವುಗಳಲ್ಲಿ ಮನಸ್ಸಿನ ವೃತ್ತಿಗೆ ಸಂಬಂಧಿಸಿದ ವೇದನಾ, ಸಂಜ್ಞಾ, ಸಂಚಾರ, ವಿಜ್ಞಾನ ಇವುಗಳು ನಾಲ್ಕು ಸ್ಕಂಧಗಳು ನಾಮವನ್ನು ಸೂಚಿಸುತ್ತವೆ. ದೇಹದ ಆಕೃತಿಯು ರೂಪವನ್ನು ಸೂಚಿಸುತ್ತದೆ. ಈ ಐದು ಸ್ಕಂಧಗಳಿಗೆ ಒಳಗಾದರೆ ಅಂದರೆ ಇವುಗಳಲ್ಲಿ ದುರಭಿಮಾನಿಯಾದರೆ ದುಃಖವು ಹಿಂದೆಯೇ ಬರುತ್ತದೆ. ಇವುಗಳನ್ನು ಜಯಿಸುವುದಕ್ಕೆ ಉತ್ತಮ ಮಾರ್ಗವಿದೆ.

ಅಕ್ಕೋಧೇನಜಿನೇಕೋಧಜ್ । ಅಸಾಧುಜ್ ಸಾಧಾನಾಜಿನೇ
ಜಿನೇಕದರಿಯಜ್ ದಾನೇನ ಸಚ್ಚೇ ಅಲಿಕವಾದಿನಜ್ ॥

ಕ್ರೋಧವನ್ನು ಮೈತ್ರಿಯಿಂದಲೂ ಅಸಾಧುವಾದುವನ್ನು ಸಾಧುಗುಣದಿಂದಲೂ ಜಿಪುಣನನ್ನು ದಾನದಿಂದಲೂ ಸುಳ್ಳಾಡುವವನನ್ನು ಸತ್ಯದಿಂದಲೂ ಜಯಿಸಬೇಕು. ಹಿಂಸಾ ಜೀವಿಗಳು ಶರೀರದ ದುಷ್ಟಪ್ರವೃತ್ತಿಗೆ ದಾಸರಾಗಿರುವವರು ಕೋಪರಹಿತರಾಗಿ ಅಮರತ್ವವನ್ನು ಹೊಂದುತ್ತಾರೆ. ಜಗತ್ತಿನಲ್ಲಿ ಸ್ತುತಿ ನಿಂದೆಗಳೆರಡೂ ದುಃಖಕಾರಿಗಳು. ಸ್ತುತಿ ನಮ್ಮಲ್ಲಿ ಆಸೆಯನ್ನು ಕೆರಳಿಸುತ್ತದೆ. ನಿಂದೆ ಕ್ರೋಧವನ್ನು ಬೆಳೆಸುತ್ತದೆ. ಲೋಕದಲ್ಲಿ ಮೌನದಿಂದಿರುವವನನ್ನೂ ಅತಿ

ಅಯಾಗಿ ಮಾತನಾಡುವವರನ್ನೂ ಮಿತಿಯಾಗಿ ಮಾತನಾಡುವವನನ್ನೂ ನಿಂದಿಸುವ ಜನರಿದ್ದಾರೆ. ಒಂದು ಗುಣವನ್ನು ಕಂಡು ಒಬ್ಬರು ನಿಂದಿಸಿದರೆ ಮತ್ತೊಬ್ಬರು ಅದನ್ನೇ ಪ್ರಶಂಸೆ ಮಾಡಬಹುದು. ಇವುಗಳಲ್ಲಿ ಯಾವುದೇ ಒಂದಕ್ಕೆ ನಾವು ಮಾರುಹೋದರೂ ನಾವು ದುಃಖಿತರಾಗುವುದು ಖಂಡಿತ. ಇದು ಬಹುಕಾಲದ ಲೋಕಾನುಭವ. ಆದುದರಿಂದ ಸ್ತುತಿ ನಿಂದೆಗಳಿಗೆ ಹಿಗ್ಗದೆ ಕುಗ್ಗದೆ ಸಂಯಮಶೀಲರಾಗಿರಬೇಕು. ಕಾಯಾ ವಾಚಾ ಮನಸಾ ಸಂಯಮದಿಂದಿರುವುದು ಧೀರತನ. ಅದು ನಿಜವಾದ ಸಂಯಮ ಎಂದು ಕ್ರೋಧ ಉದಿಸುವುದನ್ನು ಅದರಿಂದಾಗುವ ಪರಿಣಾಮವನ್ನು ಈ ಅಧ್ಯಾಯದಲ್ಲಿ ತಿಳಿಸಿದೆ.

## ೧೮. ಮಲವಗ್ಗ

ಮಾನವಜೀವನ ಅನಿತ್ಯವಾದುದು. ಅವನು ಇಲ್ಲಿಂದ ಯಾತ್ರೆಯನ್ನು ಮುಗಿಸಿ ಮುಂದೆಸಾಗಲೇ ಬೇಕು. ಇಲ್ಲಿರಲು ಸ್ಥಳವಿಲ್ಲ. ಮುಂದೆಹೋಗಲು ಬುತ್ತಿಯು ಇಲ್ಲ. ತನುಮನಕ್ಕೆ ಮುತ್ತಿರುವ ಮಲಗಳನ್ನು ನೀಗಿಕೊಂಡು ಪುನಃ ದುಃಖಮಯವಾದ ಹುಟ್ಟುಸಾವುಗಳಿಲ್ಲದಂತೆ ಮಾಡಿಕೊಳ್ಳಬೇಕು. ಕಬ್ಬಿಣದಿಂದ ಹುಟ್ಟುವ ತುಕ್ಕು ಕೊನೆಗೆ ಕಬ್ಬಿಣವನ್ನೇ ತಿನ್ನುವಂತೆ ಅವನವನ ಕರ್ಮಗಳು ಕೊನೆಗೆ ಅವನನ್ನೇ ತಿನ್ನುತ್ತವೆ. ಆದುದರಿಂದ ಮಲವನ್ನಪಹರಿಸಿಕೊಳ್ಳಬೇಕು. ಅದೇ ಧರ್ಮ ಗ್ರಂಥಗಳ ಗುರಿ. ಮತ್ತೆ ಮತ್ತೆ

ತ್ವವನ್ನು ಹೇಳದಿದ್ದರೆ, ಅದು ಧರ್ಮಗ್ರಂಥಗಳಿಗೆ ಮಲ. ತತ್ವಗಳನ್ನು ಲಕ್ಷಿಸದಿರುವುದು ಮನಕ್ಕೆ ಮಲ. ಸೋಮಾರಿತನ ಸೌಂದರ್ಯಕ್ಕೆ ಮಲ. ಎಚ್ಚರಿಕೆ ತಪ್ಪುವುದು ರಕ್ಷಣೆಗೆ ಮಲ. ಸ್ತ್ರೀಗೆ ದುಶ್ಚರಿತವೇ ಮಲ. ದಾನಿಗೆ ಜಿಪುಣತನವೇ ಮಲ. ಇವೆಲ್ಲಕ್ಕಿಂತಲೂ ಮಿಗಿಲಾದುದು ಅವಿದ್ಯೆಯೆಂಬ ಮಲ. ಅದನ್ನು ನೀಗಿಕೊಂಡರೆ ಎಲ್ಲ ಮಲದ ಪರಿಹಾರ. ಸ್ವಭಾವದಲ್ಲಿ ಕಾಗೆಯಂತೆ ನಾಚಿಕೆಯಿಲ್ಲದವನು ಚಾಡಿ ಹೇಳುವವನು ಅಹಂಕಾರಭರಿತನು ಜೀವನವನ್ನು ಸುಲಭವಾಗಿ ಸಾಗಿಸುತ್ತಾನೆ. ನಮ್ರನಾಗಿ ಶುದ್ಧ ಜೀವನ ನಡೆಸುತ್ತ, ವಿಚಾರಶೀಲನಾಗಿ ಲಜ್ಜಾವಂತನಾಗಿರುವವನ ಜೀವನ ಕಷ್ಟಕರವಾಗಿ ಕಾಣುತ್ತದೆ. ಆದರೆ ಅವನೇ ಮಲಗಳನ್ನು ನೀಗಿಕೊಂಡು ಸ್ವ[illegible]ವಿಯಾಗುತ್ತಾನೆ. ಪ್ರಾಣಹತ್ಯೆ ಮಾಡುವವರು, ಸುಳ್ಳಾಡುವವರು, ವ್ಯಭಿಚಾರಿಗಳು, ಮದ್ಯಪಾನಮಾಡುವವರು ತಮ್ಮ ಅವನತಿಯನ್ನು ತಾವೇ ರಚಿಸಿಕೊಳ್ಳುತ್ತಾರೆ. ಮಾನವರು ಅತೃಪ್ತಿಯನ್ನು ನೀಗಿಕೊಂಡು ನಿತ್ಯಾನಂದವನ್ನು ಪಡೆಯಬೇಕು. ರಾಗಕ್ಕೆ ಸಮನಾದ ಬೆಂಕಿ ಇಲ್ಲ. ದ್ವೇಷಕ್ಕೆ ಸಮನಾದ ಬಂಧನವಿಲ್ಲ, ಮೋಹಕ್ಕೆ ಸಮನಾದ ಬಲೆ ಇಲ್ಲ. ತೃಷ್ಣೆಗೆ ಸಮನಾದ ನದಿಯಿಲ್ಲ. ಇವು ಬೆಳಸಿಕೊಂಡವನನ್ನೆ ಅಳಿಸಿಬಿಡುತ್ತವೆ. ಸಮಣರು, ಅಂದರೆ ಬುದ್ಧತತ್ವಾವಲಂಬಿಗಳು ಇವುಗಳಿಂದ ದೂರವಾಗಿ ಚಂಚಲರಹಿತರಾಗಿ ಈ ಪ್ರಪಂಚದ ಬಂಧನದಿಂದ ಮುಕ್ತರಾಗುತ್ತಾರೆ. ಆದುದರಿಂದ ಮಾನವರು ಕ್ಷಣ ಕ್ಷಣದಲ್ಲೂ ಮಲ

ಗಳನ್ನು ಪರಿಹರಿಸಿಕೊಂಡು ಬಂಧಮುಕ್ತರಾಗಲು ಯತ್ನಿಸಬೇಕೆಂದು ಈ ಅಧ್ಯಾಯದಲ್ಲಿ ತಿಳಿಸಿದೆ.

## ೧೯. ಧಮ್ಮಟ್ಠವಗ್ಗ

ಈ ಅಧ್ಯಾಯದಲ್ಲಿ ಮಾನವರು ಆಚರಿಸಬೇಕಾದ ಧರ್ಮಗಳನ್ನು ನಿರೂಪಿಸಿದೆ. ನಮಗೆ ತಪ್ಪು ಒಪ್ಪುಗಳನ್ನು ವಿಚಾರಿಸುವ ವಿವೇಚನಾಶಕ್ತಿ ಬೇಕು. ಪರ ವಿಷಯದಲ್ಲಿ ನಿಷ್ಪಕ್ಷಪಾತವಾದ ನ್ಯಾಯವಾದ ಅಭಿಪ್ರಾಯವನ್ನು ಸೂಚಿಸುವವರು ಜಾಣರಾಗುತ್ತಾರೆ. ಅತಿಯಾಗಿ ಮಾತನಾಡುವವರು ಜಾಣರಲ್ಲ. ಶಾಂತಸ್ವಭಾವ, ದ್ವೇಷವಿಲ್ಲದವನು, ಭಯರಹಿತನು, ಅರಿತಷ್ಟು ಧರ್ಮವನ್ನು ಎಚ್ಚರತಪ್ಪದೆ ಅನುಸರಿಸುವವನು ಧರ್ಮಧರನಾಗುತ್ತಾನೆ.

ತಲೆ ಬೆಳ್ಳಗಾದವರೆಲ್ಲ ಹಿರಿಯರಲ್ಲ. ಯಾರಲ್ಲಿ ಸತ್ಯ, ಧರ್ಮ, ಅಹಿಂಸೆ, ಸಂಯಮ, ದಮೆ ಇರುವುವೊ ಅವರು ನಿಜವಾದ ಹಿರಿಯರು ಎಂದು ಕರೆಯಲ್ಪಡುತ್ತಾರೆ. ಧರ್ಮ ಪಾಲಕನಾಗದೆ ಲೋಭಿಯಾಗಿರುವವನು ಶ್ರಮಣನಾಗಲಾರ. ವೇಷಧಾರಿಗಳಾಗಿ ಬೇಡುವವರೆಲ್ಲ ಭಿಕ್ಷುಗಳಲ್ಲ. ಬ್ರಹ್ಮಚರ್ಯಪಾಲಕನು, ಪುಣ್ಯ ಪಾಪಗಳೆರಡನ್ನು ತೊರೆದವನು ನಿಜವಾದ ಭಿಕ್ಷು. ಮೂಢನು ಅವಿದ್ಯಾವಂತನು ಆದವನು ಮೌನದಿಂದ ಇದ್ದ ಮಾತ್ರಕ್ಕೆ ಮುನಿಯಾಗಲಾರ. ಯಾರು ಪಾಪಗಳನ್ನು ವರ್ಜಿಸಿ ಒಳ್ಳೆಯದನ್ನು ಮಾತ್ರ ಆರಿಸಿಕೊಳ್ಳು

ನಡೆ ಅನರು ಮಾತ್ರ ನಿಜವಾದ ಮುನಿಗಳಾಗುತ್ತಾರೆ. ಸರ್ವ ಜೀವದಯಾಪರನಾದವನು ಆರ್ಯನೆನಿಸಿಕೊಳ್ಳುತ್ತಾನೆ. ಶೀಲವ್ರತಗಳ ಪಾಲನೆಯಿಂದಾಗಲೀ, ಅತ್ಯಂತ ಪಾಂಡಿತ್ಯದಿಂದಾಗಲೀ ಅಥವಾ ಹಿರಿಯರ ಆದೇಶದಂತೆ ಬಂಧನಮುಕ್ತರಾಗಿದ್ದೇವೆಂದು ತಿಳಿಯುವುದರಿಂದಾಗಲೀ ಭಿಕ್ಷುಗಳು ತೃಪ್ತರಾಗಬಾರದು. ತನು ಮತ್ತು ಮನದ ಎಲ್ಲ ವಿಕಾರಗಳನ್ನು ನೀಗಿಕೊಳ್ಳುವವರೆಗೂ, ಭಿಕ್ಷುಗಳು ಪ್ರಯತ್ನಶೀಲರಾಗಬೇಕು. ಈ ಅಧ್ಯಾಯದಲ್ಲಿ ಬೌದ್ಧಧರ್ಮದ ಸಂಘಾನುಯಾಯಿಗಳು ವೇಷಭೂಷಣಗಳಿಂದ ತೃಪ್ತರಾಗದೆ ಧರ್ಮಾಚರಣೆಯಿಂದ ಹಿರಿತನವನ್ನು ಗಳಿಸಬೇಕೆಂದು ಸೂಚಿಸಿದೆ.

## ೨೦. ಮಗ್ಗವಗ್ಗ

ಇಲ್ಲಿ ಮಾನವತೆಯ ಗುರಿಯನ್ನು ಮುಟ್ಟಲು ಅರ್ಥಾತ್ ಸರ್ವದುಃಖಗಳನ್ನು ನೀಗಿಕೊಳ್ಳಲು ಅನುಸರಿಸಬೇಕಾದ ಶ್ರೇಷ್ಠ ಮಾರ್ಗಗಳನ್ನು ಹೇಳಿದೆ.

ಮಗ್ಗನಟ್ಠಂಗಿಕೋ ಸೆಟ್ಠೋ
ಸಚ್ಚಾನಜ್ ಚತುರೋಪದಾ
ವಿರಾಗೋ ಸೆಟ್ಠೋ ಧಮ್ಮಾಜ್
ದಿಪದಾನಜ್ ಚಚಕ್ಖುಮಾ

ಮಾರ್ಗಗಳಲ್ಲಿ ಅಷ್ಟಾಂಗಮಾರ್ಗಗಳು ಅಂದರೆ ಸಮ್ಯಕ್ ದೃಷ್ಟಿ, ಸಮ್ಯಕ್ ಸಂಕಲ್ಪ, ಸಮ್ಯಕ್ ವಾಚಾ, ಸಮ್ಯಕ್

ಕರ್ಮಾಂತ, ಸಮ್ಯಕ್ ಆಜೀವ, ಸಮ್ಯಕ್ ವ್ಯಾಯಾಮ, ಸಮ್ಯಕ್ ಸ್ಮೃತಿ, ಸಮ್ಯಕ್ ಸಮಾಧಿ ಇವು ಶ್ರೇಷ್ಠ ಮಾರ್ಗಗಳು. ಯಾವುದೇ ವಿಷಯವಲ್ಲಾಗಲೀ, ಅಂಧನಂಬಿಕೆ ಪಕ್ಷಪಾತ ಮನೋಭಾವನೆಯನ್ನು ತಾಳದೆ ವಿಚಾರದೃಷ್ಟಿಯಿಂದ ಸ್ವೀಕರಿಸುವುದು ಮೊದಲನೆಯ ಮಾರ್ಗ. ಪರಹಿತಚಿಂತಕರಾಗುವುದು ಎರಡನೇ ಮಾರ್ಗ, ನುಡಿಯಿಂದ ಯಾರನ್ನು ನೋಯಿಸದೆ ಇರುವುದು ಮೂರನೇ ಮಾರ್ಗ. ನಡೆಯಿಂದ ತನ್ನನ್ನು ಪರರನ್ನು ಉದ್ಧರಿಸುವುದು ನಾಲ್ಕನೆ ಮಾರ್ಗ, ದುರ್ಜನರನ್ನವಲಂಬಿಸದೆ ಸ್ವಾವಲಂಬಿಯಾಗುವುದು ಐದನೇ ಮಾರ್ಗ. ದೈಹಿಕ ಮತ್ತು ಮಾನಸಿಕ ಪರಿಶುದ್ಧತೆಗೆ ಉತ್ತಮ ಸಾಧನೆ ಮಾಡುತ್ತ ಧ್ಯಾನಾಸಕ್ತನಾಗುವುದು ಆರನೇ ಮಾರ್ಗ. ಹೇಡಿತನ, ಕ್ರೂರಭಾವನೆಗಳನ್ನು ಅಳಿಸಿ ಯೋಗಸಾಧನೆಯಲ್ಲಿ ತೊಡಗುವುದು ಏಳನೇ ಮಾರ್ಗ. ಸದ್ಗುಣಶೀಲನಾಗಿ ಜರಾಮರಣಗಳನ್ನು ನಿವಾರಿಸಿ ಸ್ಥಿತ ಪ್ರಜ್ಞತೆಯನ್ನು ಮುಟ್ಟುವುದು [illegible] ಅಂತ್ಯದ ಮಾರ್ಗ. ಇವೇ ನಿರ್ವಾಣದ ಪಥ.

ಸತ್ಯದಲ್ಲಿ ಆರ್ಯಸತ್ಯವೇ ಶ್ರೇಷ್ಠವಾದುದು. ದುಃಖ, ದುಃಖಸಮುದಾಯ, ದುಃಖನಿರೋಧ, ದುಃಖನಿರ್ಮೂಲನ. ಇವೇ ನಾಲ್ಕು ಆರ್ಯಸತ್ಯಗಳು. ಜೀವನವು ದುಃಖಮಯವಾದುದು. ಈ ದುಃಖ ಹನ್ನೆರಡು ವಿಧವಾದ ಕೊಂಡಿಗಳಿಂದ ಕೂಡಿಕೊಂಡ ಸರಪಳಿಯ ಚಕ್ರವಾಗಿದೆ. ಅವಿದ್ಯೆ, ಸಂಸ್ಕಾರ,

ವಿಜ್ಞಾನ, ನಾಮರೂಪ, ಷಡಾಯತನ (ಇಂದ್ರಿಯ-ಪ್ರವೃತ್ತಿ) ಸ್ಪರ್ಶ, ವೇದನೆ, ತೃಷ್ಣೆ, ಉಪಾದಾನ, ಭವ, ಜಾತಿ, ಜರಾಮರಣ ಇವು ಸಂಸಾರಚಕ್ರದ ಹನ್ನೆರಡು ಕೊಂಡಿಗಳು. ಇವೇ ದುಃಖಸಮುದಾಯ. ಇವುಗಳಿಗೆ ಮೂಲಕಾರಣವನ್ನು ಕಿತ್ತೊಗೆಯುವುದೇ ಅಂದರೆ ಅವಿದ್ಯೆಯನ್ನು ತೊಲಗಿಸುವುದೇ ದುಃಖನಿರೋಧಸತ್ಯ. ಈ ದುಃಖವನ್ನು ನಿವಾರಿಸಲು ಮೇಲೆ ಹೇಳಿದ ಎಂಟುಮಾರ್ಗಗಳು ಸಾಧನವೆಂದು ನಂಬಿ ನಡೆಯುವುದು ನಾಲ್ಕನೆಯ ಸತ್ಯ. ಧರ್ಮಗಳಲ್ಲಿ ವೈರಾಗ್ಯವೇ ಶ್ರೇಷ್ಠವಾದ ಧರ್ಮ. ಮಾನವರಲ್ಲಿ ಹಿಂದೆ ಹೇಳಿದ ಎಂಟುಮಾರ್ಗಗಳನ್ನು ಅನುಸರಿಸಿ ನಿರ್ವಾಣಪದವಿಯನ್ನು ಹೊಂದುವ ಬುದ್ಧರು ಶ್ರೇಷ್ಠರು. ಇದು ಬುದ್ಧಭಗವಾನರಿಗೆ ದೊರೆತ ದಿವ್ಯಾನುಭವದ ಸಂದೇಶ. ಇದನ್ನು ಮಾನವನೇ ಕಷ್ಟಪಟ್ಟು ಸಾಧಿಸಬೇಕು. ಬೋಧನೆ ಕೇವಲ ಮಾರ್ಗದರ್ಶನ ಮಾತ್ರ. ಪಂಚಭೂತಾತ್ಮಕವಾದ ದೇಹದಿಂದ ನಡೆಯುವ ವ್ಯವಹಾರಗಳು ಅನಿತ್ಯವಾದವು ಮತ್ತು ದುಃಖಕರವಾದವುಗಳು ಪ್ರಪಂಚದಲ್ಲಿರುವ ಉಪಾಧಿ ಮತ್ತು ನಿರುಪಾಧಿಕವಾದ ಎಲ್ಲ ವಸ್ತುಗಳಿಗೂ ಧರ್ಮ ಅಂದರೆ ಸ್ವಭಾವವೊಂದಿದೆ. ವ್ಯವಹಾರದಲ್ಲಿ ಅನುಭವಿಸುವ ವಸ್ತುವಿನ ಸ್ವಭಾವವೇ ಅದರ ಆತ್ಮ. ಈ ಸ್ವಭಾವಸಿದ್ಧವಾದ ಅಂತಸ್ಸತ್ವವು ನಿತ್ಯವಾದ ನಿರ್ವಾಣವನ್ನು ದೊರಕಿಸಿಕೊಡಲಾರವು. ಆದುದರಿಂದ ಇದು ಅನಿತ್ಯವಾದುದು, ಅನಾತ್ಮವಾದುದು ಎಂಬುದರ ಅರಿವು ಬಂದರೆ

ಮಾನವನು ದುಃಖದಿಂದ ಮುಕ್ತನಾಗುತ್ತಾನೆ. ಮಾನವರು ಈ ಜೀವನದಲ್ಲಿ ಸೋಮಾರಿಗಳಾಗದೆ ಕಾಲವರಿತು ಸಾಧನೆ ಮಾಡಬೇಕು. ಸುಡಿಯಲ್ಲಿ ಎಚ್ಚರಿಸಬೇಕು. ಮನದಲ್ಲಿ ಸಂಯಮವಿರಬೇಕು. ಕುಶಲಕರ್ಮವನ್ನು ನಡೆಸಬೇಕು. ಅಂದರೆ ತ್ರಿಕರಣಶುದ್ಧವಾಗಿರಬೇಕು. ಹೀಗೆ ನಡೆದರೆ ಧ್ಯಾನ ದಿಂದ ಜ್ಞಾನವು, ಜನಿಸಿ ಬೆಳೆದು ಅಭ್ಯುದಯಕ್ಕೆ ದಾರಿ ಯಾಗುತ್ತದೆ. ಐಹಿಕವಾದ ಧನ ಕನಕ ವಸ್ತುವಾಗಲಿ, ಸತಿ ಸುತರೆ ಮೊದಲಾದ ಬಂಧುಗಳಾಗಲಿ, ಸ್ವಪ್ರಯತ್ನಶೀಲ ರಾಗದ ಮಾನವರನ್ನು ದುಃಖಚಕ್ರದಿಂದ ಬಿಡಿಸಲಾರರು. ಆದುದರಿಂದ ಅಷ್ಟಾಂಗ ಮಾರ್ಗವೇ ಮಾನವರನ್ನು ನಿರ್ವಾ ಣಕ್ಕೆ ಕೊಂಡೊಯ್ಯುವ ಮಾರ್ಗವೆಂದು ಅದನ್ನ ಮಾನ ವರು ಅನುಸರಿಸಲೆಂದು ಬುದ್ಧಭಗವಾನರು ಹೇಳಿದ್ದಾರೆ. ತಮ್ಮ ದಿವ್ಯ ಸಾಕ್ಷಾತ್ಕಾರದ ಸಂದೇಶವು ಈ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದೆ.

## ೨೧. ಪಕಿಣ್ಣ ವಗ್ಗ

ವಿವಿಧ ವಿಷಯಗಳ ವಿವರಣೆಯಿರುವುದರಿಂದ ಈ ಅಧ್ಯಾ ಯಕ್ಕೆ ಪಕಿಣ್ಣ ವಗ್ಗವೆಂದು ಹೆಸರು. ಅಲ್ಪ ಸುಖವನ್ನು ತ್ಯಜಿಸಿದರೆ ಅಪಾರ ಸುಖ ದೊರೆಯುತ್ತದೆ. ಜನರು ಅಲ್ಪ ವನ್ನು ತ್ಯಜಿಸಿ ವಿಪುಲ ಸುಖವನ್ನು ಪಡೆಯಬೇಕು. ಪರ ಪೀಡಕರು ಬಂಧನದಲ್ಲಿ ಸಿಕ್ಕಿ ನರಳುತ್ತಾರೆ. ಮಾಡಬೇಕಾ

ಮದವನ್ನು ಬಿಟ್ಟು ಮಾಡಬಾರದುದನ್ನು ಮಾಡುವವರಿಗೆ ಪಾಪವನ್ನು ಮೋಹ ಹೆಚ್ಚಿ ಮುಕ್ತಿಗೆ ದೂರವಾಗುತ್ತಾರೆ. ತೃಷ್ಣೆ ಮತ್ತು ಮದವನ್ನು ಅಳಿಸಿ ಅಸ್ತಿ ಮತ್ತು ನಾಸ್ತಿ ಎಂಬ ಎರಡು ಅತೀವ ಮಾರ್ಗಗಳನ್ನು ಬಿಟ್ಟು ಮೋಹ ಅನುರಾಗಗಳನ್ನು ತೊರೆದು ಮಾನಸಿಕ ದುರ್ಬಲತೆಯನ್ನು ನೀಗಿದಂತಹ ಅರಹಂತನು ದುಃಖರಹಿತನಾಗುತ್ತಾನೆ. ಬುದ್ಧನಿಗೆ, ಧರ್ಮಕ್ಕೆ, ಸಂಘಕ್ಕೆ ಶರಣಾದವರು ದೇಹವಿಕಾರವನ್ನು ಗೆಲ್ಲುವರು. ಅವರು ಎಚ್ಚರದಿಂದ ನಡೆಯುವವರಾಗಿರುತ್ತಾರೆ.

ತ್ಯಾಗವೂ ಕಷ್ಟ. ಆದುದರಿಂದ ಅದರಲ್ಲಿ ಸುಖ ಪಡೆಯುವುದು ಕಠಿಣವಾದ ಕೆಲಸ. ಸಂಸಾರವು ದುಃಖಮಯ. ಅದರಲ್ಲೇ ಸುತ್ತಾಡುತ್ತಾ ಮಾನವರು ದುಃಖಿಗಳಾಗುತ್ತಾರೆ. ಶೀಲವಂತನು ಎಲ್ಲವನ್ನು ಜಯಿಸುವನು. ಸತ್ಪುರುಷರು ಸರ್ವಕೀರ್ತಿಭಾಜನರು. ದುಷ್ಟರು ಅಗೋಚರರು ಅಂದರೆ ಅವರ ಹೆಸರು ಬೇಗ ಅಳಿದುಹೋಗುತ್ತದೆ. ದುಃಖವನ್ನು ಕಳೆದುಕೊಳ್ಳಬೇಕಾದವರು ಸಾಧ್ಯವಾದಮಟ್ಟಿಗೆ ಏಕಾಂತವನ್ನೇ ಬಯಸಬೇಕು. ಅದರಲ್ಲೇ ಆನಂದವನ್ನು ಹೊಂದಬೇಕು. ಇತ್ಯಾದಿ ನಾನಾ ವಿಷಯಗಳು ಇಲ್ಲಿ ಹೇಳಲ್ಪಟ್ಟಿವೆ.

## ೨೨. ನಿರಯ ವಗ್ಗ

ಧರ್ಮಮಾರ್ಗಾವಲಂಬಿಗಳಾದ ಜನರು ಸತ್ತಮೇಲೂ

ನರಕವಾಸವನ್ನು ಅನುಭವಿಸಿ ಸಂಕಟದಲ್ಲಿ ಸಿಕ್ಕುವರೆಂದು ಈ ಅಧ್ಯಾಯದಲ್ಲಿ ಎಚ್ಚರಿಕೆ ಕೊಡಲಾಗಿದೆ. ಸುಳ್ಳಾಡುವವರು ಸಂಯಮರಹಿತರು ಶೀಲರಹಿತರು ನರಕವನ್ನು ಅನುಭವಿಸುವರು. ಪರಪತ್ನಿಯರಲ್ಲಿ ಮೋಹವಿಡುವವರು ಪಾಪವನ್ನು ಬೆಳಸಿಕೊಳ್ಳುವರು, ಅವರಿಗೆ ನಿದ್ರಾಭಂಗವಾಗುವುದು. ನಿಂದೆಗೆ ಗುರಿಯಾಗುವರು ಕೊನೆಯದಾಗಿ ನರಕವನ್ನು ಅನುಭವಿಸುವರು.

ಸರಿಯಾಗಿ ಹಿಡಿಯುವ ದರ್ಬೆಹುಲ್ಲು ತನ್ನ ಕೈಯನ್ನೇ ಕತ್ತರಿಸುವಂತೆ ಸರಿಯಾಗಿ ನಡೆಯದ ಶ್ರಮಣ ಮಾರ್ಗವು ನರಕಕ್ಕೆ ದಾರಿಯಾಗುತ್ತದೆ. ಧೃಡವಿಲ್ಲದ ಸನ್ಯಾಸವೂ ಅಪಾಯಕಾರಿ. ಅಂತರಂಗ ಬಹಿರಂಗಗಳಲ್ಲಿಯೂ ಪಾಪವು ತಾಗದಂತೆ ನಮ್ಮನ್ನು ನಾವೇ ರಕ್ಷಿಸಿಕೊಳ್ಳಬೇಕು. ವಿಚಾರಗಳ ವಿವೇಕ ನಮಗಿರಬೇಕು. ಲಜ್ಜೆ ಪಡುವುದಕ್ಕೆ ಲಜ್ಜೆ ಪಡಬೇಕು, ಭಯಪಡಬೇಕಾದುದಕ್ಕೆ ಮಾತ್ರ ಭಯಪಡಬೇಕು. ಇದನ್ನರಿಯದವರು ದುರ್ಗತಿಗೆ ತುತ್ತಾಗುತ್ತಾರೆ. ಯಾರು ತಪ್ಪನ್ನು ತಪ್ಪೆಂದೂ ಸರಿಯಾದುದನ್ನು ಮಾತ್ರ ಸರಿಯೆಂದು ಅರಿತುಕೊಳ್ಳುವ ಸಮ್ಯಕ್ ದೃಷ್ಟಿಯುಳ್ಳವರಾಗುವರೋ ಅವರು ಮಾತ್ರ ಸದ್ಗತಿಯನ್ನು ಹೊಂದುತ್ತಾರೆ. ಮಾನವರಿಗೆ ಒದಗಿ ಬರುವ ವ್ಯವಹಾರಿಕವಾದ ದುಃಖದ ಕಾರಣಗಳನ್ನು ಅವುಗಳನ್ನು ಗೆಲ್ಲುವ ರೀತಿಯನ್ನು ಈ ಅಧ್ಯಾಯದಲ್ಲಿ ಹೇಳಿದೆ.

## ೨೩. ನಾಗವಗ್ಗ

ಮಾನವನ ಗುಣಗಳ ನಿರೂಪಣೆಗೆ ಆನೆಯ ಗುಣಗಳನ್ನು ಉದಾಹರಣೆಯಾಗಿ ಈ ಅಧ್ಯಾಯದಲ್ಲಿ ಬಳಸಿಕೊಂಡಿದೆ. ಆನೆಯು ಸ್ವಾಭಾವಿಕವಾಗಿ ಭಯಂಕರ ಪ್ರಾಣಿ. ಅದು ಪಳಗಿದರೆ ಅದಕ್ಕಿಂತ ಸಾಧು ಜೀವಿಯಿಲ್ಲ. ಪಳಗಿದ ಆನೆ ಸಂಗ್ರಾಮದ ಬಾಣಗಳ ನೋವನ್ನು ಸಹಿಸುವಂತೆ ದುರ್ಜನರ ಕೆಟ್ಟ ಮಾತುಗಳ ಬಗ್ಗೆಯೂ ಸಹನೆಯಿರಬೇಕು. ಪಳಗಿದ ಆನೆ ರಾಜನ ವಾಹನವಾಗಿ ಜನರ ಮಧ್ಯೆ ಸುಳಿದು ಗೌರವಕ್ಕೆ ಪಾತ್ರವಾಗುತ್ತದೆ. ಅಂತೆಯೇ ದುರ್ಜನರ ಕೆಡು ನುಡಿಗಳಿಗೆ ಉದ್ವಿಗ್ನರಾಗದವರು ಶ್ರೇಷ್ಠರಾಗುತ್ತಾರೆ. ಪಳಗಿದ ಅಶ್ವಗಳು, ವಿಷರಹಿತ ಹಲ್ಲುಗಳನ್ನುಳ್ಳ ಹಾವುಗಳು ಇವುಗಳಿಗಿಂತಲೂ ಮನೋವಿಕಾರವನ್ನು ದಮನಮಾಡಿಕೊಂಡವನು ಶ್ರೇಷ್ಠನು. ಮನಸ್ಸು ಸ್ವೇಚ್ಛೆಯಾಗಿ ವರ್ತಿಸುತ್ತದೆ. ಮದಿಸಿದ ಆನೆಯನ್ನು ಅಂಕುಶದಿಂದ ನಿಗ್ರಹಿಸುವಂತೆ ಮನಸ್ಸನ್ನು ದಮನಮಾಡಿಕೊಳ್ಳಬೇಕು. ಮನಸ್ಸನ್ನು ನಿಗ್ರಹಿಸಲು ಉತ್ತಮ ಜನರ ಸಹವಾಸಬೇಕು. ತಪ್ಪಿದರೆ ಒಂಟಿಯಾಗಿಯೇ ಇರುವುದು ಲೇಸು. ತಾಯಿ ತಂದೆ ಶ್ರಮಣರು ಮತ್ತು ಸಂತರ ಸಹವಾಸದಿಂದ ಮನಸ್ಸನ್ನು ದೃಢಪಡಿಸಿಕೊಂಡು ಶ್ರೇಷ್ಠರಾಗಬಹುದೆಂದು ಇಲ್ಲಿ ತಿಳಿಸಿದೆ.

## ೨೪. ತಣ್ಹಾವಗ್ಗ

ಮನಸ್ಸಿನಲ್ಲಿ ಆಕಾಂಕ್ಷೆಗಳು ಮೂಡಿದರೆ ಅದಕ್ಕೆ ಎಲ್ಲೆಯೇ

ಇಲ್ಲದಂತಾಗಿ ತೃಪ್ತಿಯನ್ನೇ ಕಾಣದೆ ಮಾನವ ಪರಿತಪಿಸುತ್ತಾನೆ. ಜನನ ಮರಣಗಳ ಚಕ್ರದಲ್ಲಿ ಸಿಕ್ಕಿ ನರಳುತ್ತಾನೆ. ಮರವನ್ನು ಆಸರೆಯಾಗಿ ಮಾಡಿಕೊಂಡ ಬಳ್ಳಿ ಮರವನ್ನೇ ನಾಶಮಾಡುವಂತೆ ಮನದ ಬಯಕೆಗಳು ಬೆಳೆದು ಮನವನ್ನೇ ದುರ್ಗತಿಗೆ ಗುರಿಮಾಡುತ್ತವೆ. ಅವನ್ನು ಗೆದ್ದವರು ಜಗತ್ತಿನಲ್ಲಿ ಎಲ್ಲವನ್ನೂ ಜಯಿಸುವರು. ಆದುದರಿಂದ ಈ ಬಯಕೆಯ ಮೂಲವನ್ನೇ ಕಿತ್ತೊಗೆಯಬೇಕು. ಭೋಗಾದಿ ವಿಷಯಗಳಲ್ಲಿ ನಿರತನಾದವನು ಆಕಾಂಕ್ಷೆಗಳ ವಾಹಿನಿಯಲ್ಲಿ ಕೊಚ್ಚಿ ಹೋಗುತ್ತಾನೆ. ಜಗತ್ತಿನ ಎಲ್ಲ ವಸ್ತುಗಳೂ ಆಕಾಂಕ್ಷೆಯನ್ನು ವೃದ್ಧಿಸುತ್ತವೆ. ಬಯಕೆಗಳಿಗೆ ಬಲಿಯಾದವನು ಸನ್ಯಾಸಿಯಾದರೂ ಮತ್ತೆ ಸಂಸಾರಕ್ಕೆ ಬರಲೆಳಸುತ್ತಾನೆ. ಸಂಸಾರಿಯಾದವನು ಸನ್ಯಾಸಿಯಾಗಲೆಳಸುತ್ತಾನೆ. ಆಕಾಂಕ್ಷೆಯ ಆಧಾರದ ಮೇಲೆ ಯಾವುದೇ ಜೀವನವನ್ನು ಅವಲಂಬಿಸಿದರೂ ಅದು ನಿರುಪಯುಕ್ತ. ಕಬ್ಬಿಣ, ಮರ ಅಥವಾ ನಾರಿನಿಂದ ಮಾಡಿದ ನೂಲಿನ ಬಂಧನಕ್ಕಿಂತ ಸತಿಸುತರ ಮೋಹದ ಬಂಧನವು ಅತ್ಯಂತ ಬಲಯುತವಾದುದು. ಅದರಿಂದ ಬಿಡಿಸಿಕೊಳ್ಳುವುದು ಕಠಿಣ. ತೃಷ್ಣೆಯಿಂದ ಬಿಡುಗಡೆಯಾದವನಿಗೆ ಈ ಶರೀರವೇ ಕೊನೆಯದು. ಅವನು ಎಲ್ಲವನ್ನೂ ಜಯಿಸಿದವನು. ಹೊಲಗಳಲ್ಲಿ ಕಳೆಯು ಬೆಳೆಗೆ ಮಾರಕವಾದಂತೆ ಮನುಷ್ಯರಲ್ಲಿ ಮೋಹವೇ ಅವರ ನಿರ್ವಾಣ ಪ್ರಾಪ್ತಿಗೆ ಅಡ್ಡಿಯಾಗುತ್ತದೆ. ಅದನ್ನರಿತು ಮಾನವನು ಆಶೆಯನ್ನು ದೂರಮಾಡಿ ಜರಾಮರಣಗಳನ್ನು

ಗೆದ್ದು ನಿರ್ವಾಣವನ್ನು ಹೊಂದಬೇಕೆಂದು ಈ ವಗ್ಗದಲ್ಲಿ ವಿವರಿಸಿದೆ.

## ೨೫. ಭಿಕ್ಖುವಗ್ಗ

ನೋಟದಲ್ಲಿ, ಶ್ರೋತ್ರದಲ್ಲಿ, ಸುವಾಸನೆಯನ್ನು ಅನುಭವಿಸುವುದರಲ್ಲಿ, ಆಹಾರವನ್ನು ಸ್ವೀಕರಿಸುವುದರಲ್ಲಿ, ಕೃತಿಯಲ್ಲಿ ಮತ್ತು ಮಾತಿನಲ್ಲಿ ಇಷ್ಟೇಕೆ ಎಲ್ಲ ಆಂತರಿಕ ಬಹಿರಂಗದ ಜೀವನ ವ್ಯಾಪಾರದಲ್ಲಿಯೂ ಸಂಯಮದಿಂದಿರುವುದು ಭಿಕ್ಖುವಿನ ಲಕ್ಷಣ. ಧರ್ಮ ನಿರತನಾಗಿ ಅದರಲ್ಲೇ ಆನಂದವನ್ನು ಅನುಭವಿಸುತ್ತಾ ಅದೇ ಜೀವನದ ಉಸಿರಾಗಿ ಟ್ಟುಕೊಂಡ ಭಿಕ್ಷುವು ಎಂದೂ ಪತಿತನಾವುದಿಲ್ಲ. ಅವನು ಧರ್ಮದಿಂದ ಬಂದುದನ್ನು ತಿರಸ್ಕರಿಸನು. ಅನ್ಯರಿಗೆ ಬಂದುದಕ್ಕೆ ಅಸೂಯೆಪಡನು. ನಾಮರೂಪಗಳಲ್ಲಿ ಮಮತೆಯನ್ನು ತೊರೆದು ತನಗಿಲ್ಲದ ವಸ್ತುವಿಗಾಗಿ ಪರಿತಪಿಸದೆ ಇರುವವನೇ ನಿಜವಾದ ಭಿಕ್ಷು. ಸಂಸಾರ ಮುಕ್ತನಾಗುವವನಿಗೆ ಈ ನಿಯಮಪಾಲನೆ ಅಗತ್ಯ.

ಪಂಚ ಛಿಂದೆ ಪಂಚ ಜಹೆ। ಪಂಚ ಚುತ್ತರಿ ಭಾವಯೆ
ಪಂಚ ಸಂಗಾತಿಗೋ ಭಿಕ್ಖು। ಓಘತಿಣ್ಣೋತಿ ವುಚ್ಚತಿ ॥

ಮಮಕಾರ, ಸಂಶಯ ಶೀಲವ್ರತಾನುಸರಣೆಯಲ್ಲಿ ನಂಬಿಕೆ. ಮೋಹ, ದುರಾಲೋಚನೆಯೆಂಬ ಐದನ್ನು ಕತ್ತರಿಸಬೇಕು.

ಸಾಕಾರ, ನಿರಾಕಾರ ವಿವರಣೆಗಳಲ್ಲಿ ಮಗ್ನನಾಗುವುದು, ಮದ, ಅಶಾಂತಿ, ಅವಿದ್ಯೆ ಈ ಐದನ್ನು ನೀಗಿರಬೇಕು. ಶ್ರದ್ಧೆ, ವೀರ್ಯ, ಸಮಾಧಿ, ಜಾಗ್ರದವಸ್ಥೆ, ಜಾಣತನ ಇವುಗಳನ್ನು ಬೆಳಸಿಕೊಳ್ಳಬೇಕು. ಈ ರೀತಿಯಾಗಿ ಪಂಚಕ್ಲೇಶಗಳನ್ನು ಜಯಿಸಿದವನು ಸಂಸಾರ ಸಾಗರವನ್ನೇ ದಾಟಿದವನಾಗುತ್ತಾನೆ. ಇಂದ್ರಿಯನಿಗ್ರಹ, ಸಂತೃಪ್ತಿ, ಸಂಘದ ನಿಯಮಗಳಲ್ಲಿ ನಿಷ್ಠೆ, ಸಜ್ಜನರ ಸಹವಾಸ, ಸೋಮಾರಿತನವಿಲ್ಲದ ಶುದ್ಧ ಜೀವನ ಇವು ಪ್ರಜ್ಞಾವಂತನಾದ ಭಿಕ್ಷುವಿನ ಶ್ರೇಷ್ಠತೆಗೆ ಆಧಾರಗಳು. ಅವನು ಕಾಯಾ ವಾಚಾ, ಮನಸಾ ಶಾಂತಿಯನ್ನು ಹೊಂದಿ ಸಮತೆಯನ್ನು ಸಾಧಿಸುವವನಾಗಬೇಕು. ಮಾನವನು ತನ್ನನ್ನು ತಾನು ರಕ್ಷಿಸಿಕೊಳ್ಳುವುದು ಕ್ಷೇಮಕರ. ಅಂತೆಯೇ ಭಿಕ್ಷುವು ತನ್ನ ಧರ್ಮವನ್ನು ರಕ್ಷಿಸಿಕೊಂಡರೆ ಅದು ಅವನನ್ನು ರಕ್ಷಿಸುತ್ತದೆ. ಅತಿ ಪ್ರಮೋದವನ್ನು ಬುದ್ಧ ಶಾಸನದಲ್ಲಿ ಅಪಾರ ಶ್ರದ್ಧೆಯನ್ನು ಹೊಂದಿರುವ ಭಿಕ್ಷುವು ಶಾಂತಿಯನ್ನೂ, ನಿತ್ಯ ತೃಪ್ತಿಯನ್ನೂ ಹೊಂದಿ ನಿರ್ವಾಣಕ್ಕೆ ಅರ್ಹನಾಗುತ್ತಾನೆ. ಹೀಗೆ ಬುದ್ಧ ಶಾಸನದಲ್ಲಿ ಶ್ರದ್ಧೆಯಿಟ್ಟು ಜೀವನವನ್ನು ನಡೆಸುವ ಭಿಕ್ಷುವು ಕಾರ್ಮೋಡದಿಂದ ಬಿಡುಗಡೆಹೊಂದಿದ ಚಂದ್ರನಂತೆ ತಾನು ಎಷ್ಟೇ ಕಿರಿಯನಾದರೂ ಲೋಕದಲ್ಲಿ ಪ್ರಕಾಶಮಾನನಾಗುತ್ತಾನೆ ಎಂದು ಈ ವಗ್ಗದಲ್ಲಿ ಉತ್ತಮ ಭಿಕ್ಷುವಿನ ಲಕ್ಷಣವನ್ನೂ ಭಿಕ್ಷುವು ಅನುಸರಿಸಬೇಕಾದ ಸಾಧನಾ ಮಾರ್ಗವನ್ನೂ ಸೂಚಿಸಿದೆ.

## ೨೬. ಬ್ರಾಹ್ಮಣ ವಗ್ಗ

ಬ್ರಾಹ್ಮಣ ಎನ್ನುವುದು ಜಾತಿ ಸೂಚಕವಲ್ಲ. ಪ್ರಾಜ್ಞ ಎಂಬ ಭಾವನೆಯಿಂದ ಮಾನವ ಪ್ರಾಜ್ಞನಾಗಲು ಯಾವ ಅರ್ಹತೆಗಳಿರಬೇಕೆಂಬುದನ್ನು ಇಲ್ಲಿ ಸೂಚಿಸಿದೆ. ಎಲ್ಲ ಪಾಪಗಳನ್ನು ಗೆದ್ದವನು ಬ್ರಾಹ್ಮಣ. ಕಾಮಗಳನ್ನು ತೊರೆದವನು, ನಾನೆಂಬ ಅಹಂಕಾರವಾಗಲಿ ನನ್ನದೆಂಬ ಮಮಕಾರವಾಗಲಿ ಇಲ್ಲದವನು ಧ್ಯಾನಾಸಕ್ತನು, ಕಲ್ಮಷರಹಿತನು, ಶಾಂತಚಿತ್ತನು. ಕೃತ ಕೃತ್ಯನು, ಸದ್ಧರ್ಮಾವಲಂಬಿಯಾದವನು ಬ್ರಾಹ್ಮಣನೆನಿಸುತ್ತಾನೆ. ಬುದ್ಧ ಧರ್ಮ ಒಂದು ಜಾತಿಗೆ ಮೀಸಲಾದ ಧರ್ಮವಲ್ಲ. ಎಲ್ಲ ಮಾನವರೂ ಅನುಸರಿಸಿ ತಮ್ಮ ದುಃಖವನ್ನು ನೀಗಿಕೊಳ್ಳಬಹುದು. ಜಾತೀಯತೆಯ ಆಧಾರದ ಮೇಲೆ ಮಾನವನ ಮೇಲು ಕೀಳುಗಳನ್ನು ಅಳೆಯುವುದನ್ನು ಬುದ್ಧ ಭಗವಾನರು ಒಪ್ಪುವುದಿಲ್ಲ. ಅವರ ದೃಷ್ಟಿಯಲ್ಲಿ

ಬಾಹಿತಪಾಪೋತಿ ಬ್ರಾಹ್ಮಣೋ ಸಮಚರಿಯಾ
ಸಮಣೋತಿವುಚ್ಚತಿ ।
ಪಬ್ಬಾಜಯತ್ತನೋ ಮಲಜ್। ತಸ್ಮಾಪಬ್ಬಜಿತೋತಿವುಚ್ಚತಿ॥

ಅಂತರಿ ಪಾಪವನ್ನು ವರ್ಜಿಸಿದವನು ಬ್ರಾಹ್ಮಣ. ಆಚರಣೆಯಲ್ಲಿ ಸಮತೆಯಿಂದಿರುವವನು ಸಮಣ. ಮಲಗಳೆಲ್ಲವನ್ನೂ ಪರಿಹರಿಸಿಕೊಂಡಿರುವವನು ಭಿಕ್ಷು ಎಂದೆನಿಸುವನು. ಕೋಪರಹಿತನು, ಕಾಯಾವಾಚಾ ಮನಸಾ ಯಾರಿಗೂ ಕೆಡುಕನ್ನು

ಎಚ್ಚೆದವನು ಧರ್ಮ ಮತ್ತು ಸತ್ಯಗಳಲ್ಲಿ ನಂಬಿಕೆಯುಳ್ಳವನು ಬ್ರಾಹ್ಮಣನೇ ಹೊರತು, ಜಟೆ, ಗೋತ್ರ ಅಥವಾ ಜಾತಿಯಿಂದ ಯಾರೂ ಬ್ರಾಹ್ಮಣರಾಗುವುದಿಲ್ಲ. ಜೀವನ ಜಂಜಾಟದ ಎಲ್ಲ ಸಂಕೋಲೆಗಳನ್ನು ಕಿತ್ತೊಗೆದು ಸ್ತುತಿ ನಿಂದೆಗಳಿಗೆ ಹಿಗ್ಗದೆ ಕುಗ್ಗದೆ ಎಂತಹ ಪ್ರಸಂಗದಲ್ಲೂ ಕಾಮಕ್ಕೆ ತುತ್ತಾಗದೆ ಅಹಿಂಸಾಪರನಾಗಿ ಪ್ರಾಣಿಗಳನ್ನು ಹಿಂಸಿಸದೆ ರಾಗದ್ವೇಷ, ಮದ ಮತ್ತು ಕಪಟ ಆಚರಣೆಗಳಿಂದ ದೂರವಾಗಿರುವವನು, ಆಸೆರಹಿತನಾದವನು ಸಂಶಯಗಳಿಗೆ ಎಡೆಗೊಡದೆ ಪೂರ್ಣ ಜ್ಞಾನಿಯಾಗಿ ನಿರ್ವಾಣವನ್ನು ಅವಲಂಬಿಸಿದವನು ಶೋಕರಹಿತನು, ಶ್ರೇಷ್ಠನೂ, ವೀರನೂ, ಮಹರ್ಷಿಯೂ, ಶುದ್ಧನು ಬುದ್ಧನೂ ಆದವನು ವೀರನಾಗುತ್ತಾನೆ. ಯಾವ ಅಂತಹ ವೀರನು ತನ್ನ ಜನ್ಮಾಂತರಗಳನ್ನು ಅರಿತವನಾಗಿ ಸ್ವರ್ಗ ನರಕಗಳನ್ನು ಅರ್ಥಮಾಡಿಕೊಂಡು, ಪುನರ್ಜನ್ಮದ ಬಯಕೆ ಇಲ್ಲದವನಾಗಿ ಪೂರ್ಣ ಪ್ರಜ್ಞಾವಂತನಾಗಿ, ಇಹದಲ್ಲಿಯೇ ಸಾಧಿಸಬೇಕಾದುದೆಲ್ಲವನ್ನು ಸಾಧಿಸಿ ಮುನಿಯಾಗಿರುವನೋ ಅಂಥವನನ್ನು ಬ್ರಾಹ್ಮಣನೆಂದು ಕರೆಯಬೇಕೆಂದು ಬ್ರಾಹ್ಮಣನಾಗಲು ಅರ್ಥಾತ್ ಬೌದ್ಧರ ಸಂಪ್ರದಾಯದಂತೆ ಅರ್ಹಂತನಾಗಲು ಇರಬೇಕಾದ ಅರ್ಹತೆಗಳನ್ನು ಈ ವಗ್ಗದಲ್ಲಿ ವಿವೇಚಿಸಿದೆ.

## ಅಧ್ಯಾಯ ೩

# ಧಮ್ಮಪದ ದರ್ಶನ

ಸಂಕಟದಲ್ಲಿರುವವರನ್ನು ಕಂಡು ಅನುಕಂಪಗೊಂಡು ಅವರ ಸಂಕಟ ನಿವಾರಣೆಗೆ ನೆರವಾಗುವುದೇ ಬೌದ್ಧ ಧರ್ಮದ ಜೀವಾಳ. ಧಮ್ಮ ಪಥವು ಅಂದಿನ ಕಾಲದ ಹಿಂದಿನ ಪರಿಸ್ಥಿತಿಯನ್ನು ಮನಗಂಡು ದುಃಖನಿವಾರಣೆಯ ಮಾರ್ಗವನ್ನು ಸರಳ ರೀತಿಯಲ್ಲಿ ವಿವರಿಸುವ ಧಾರ್ಮಿಕ ಕೈಪಿಡಿಯಂತಿದೆ. ಭಯದ ಅಂಕುಶವಾಗದಿದ್ದರೆ ಧರ್ಮದಲ್ಲಿ ಅಭಿರುಚಿ ಬೆಳೆಯುವುದಿಲ್ಲ. ಅಂತೆಯೇ ಮನುಷ್ಯರಾದವರು ಪ್ರತಿಯೊಬ್ಬರೂ ಅಂಜುವುದು ಮರಣಕ್ಕೆ. ಅವರಿಗೆ ಮರಣದ ನಂತರ ಮತ್ತೆ ಮತ್ತೆ ಇದೇ ಸಂಕಟದ ಸಂಕೋಲೆಯಲ್ಲಿ ನರಳುವನೆಂಬ ಸೂಚನೆಯನ್ನಿತ್ತರೆ ಧರ್ಮದಲ್ಲಿ ನಿಷ್ಠೆ ಬೆಳೆಯುತ್ತದೆ. ಆದುದರಿಂದ ಧಮ್ಮಪದವು ಯಮಕವಗ್ಗ ಅಂದರೆ ಯಮ ಲೋಕದ ಕಲ್ಪನೆಯೊಂದಿಗೆ ಆರಂಭವಾಗುತ್ತದೆ. ದುಃಖ ನಿವಾರಣೆಗೆ ಬುದ್ಧರಿಗಿಂತಲೂ ಹಿಂದೆ ಇದ್ದ ಮಾರ್ಗದರ್ಶನಗಳನ್ನೆಲ್ಲಾ ಸೂಕ್ಷ್ಮವಾಗಿ ಈ ಗ್ರಂಥದಲ್ಲಿ ವಿವೇಚಿಸಿದೆ. ತನ್ನನ್ನು ಆವರಿಸುವ ದುಃಖಗಳನ್ನು ಎದುರಿಸಲು ಮಾನವ ಎಚ್ಚರದಿಂದಿರಬೇಕು. ಜನ್ಮಾಂತರಗಳ ಸುಳಿಯಲ್ಲಿ ಸಿಲುಕಿ ಸುತ್ತುತ್ತಿದ್ದರೂ ಅರಿಯದ ಬಾಲಕರಂತೆ

ಜೀವನವನ್ನೆಲ್ಲಾ ಮುಗಿಸುವ ಮಾನವನಿಗೆ ಚಿತ್ತಶುದ್ಧಿಯ ಆವಶ್ಯಕತೆಯನ್ನು ಮತ್ತು ಅದರ ರೀತಿನೀತಿಗಳನ್ನು ತಿಳಿ ಬೋಧಿಸಿದೆ. ಕೇವಲ ಡಾಂಭಿಕ ಆಚರಣೆಯಲ್ಲಿ ಜನರನ್ನು ಮರುಳುಗೊಳಿಸುತ್ತಿದ್ದ ಪ್ರಸಂಗಗಳು ಬುದ್ಧ ಭಗವಾನರ ಮನಸ್ಸಿಗೆ ನೋವನ್ನುಂಟುಮಾಡುತ್ತಿತ್ತು. ಆದುದರಿಂದ ನುಡಿದಂತೆ ನಡೆದುತೋರಿರುವ ಜನರನ್ನು ಮಾತ್ರ ಸಜ್ಜನರೆಂದು ಕರೆಯಬೇಕೆಂದು ಜನರನ್ನು ಎಚ್ಚರಿಸಿದರು. ಅರಿಷಡ್ವರ್ಗವನ್ನು ಮೀರಿ ಧರ್ಮಾನುಯಾಯಿಗಳಾದವರು ಅರ್ಹತ್ ಪೂಜ್ಯರಾಗುತ್ತಾರೆ. ತನ್ನ ಸಾಧನೆಯಲ್ಲಿ ವಿಜಯವನ್ನು ಗಳಿಸಿ ಮಾನವನು ಅರ್ಹಂತ ಪದವಿಗೇರಬೇಕು. ಕಾಯಾ ವಾಚಾ ಮನಸಾ ಸಂಯಮವಿರಬೇಕು. ಪಾಂಡಿತ್ಯ ಬಲದಿಂದ ಅತಿಯಾಗಿ ಮಾತನಾಡುವವರಿಗೆ ಧರ್ಮದಲ್ಲಿ ಸ್ಥಾನವಿಲ್ಲ. ಜಡೆಮುಡಿಗಳಿಂದಲೋ ಅಥವಾ ಯಾವುದೇ ರೀತಿಯ ಆಡಂಬರದ ವೇಷಭೂಷಣಗಳಿಂದಲೋ ಮನುಷ್ಯನ ಗುಣವನ್ನು ಅಳೆಯಲಾಗುವುದಿಲ್ಲ. ಇಂಥವರ ವಿಷಯದಲ್ಲಿ ಜನರು ಎಚ್ಚರದಿಂದಿರಬೇಕೆಂದು ಧರ್ಮವು ಎಚ್ಚರಿಸುತ್ತದೆ.

ಬುದ್ಧ ಧರ್ಮವನ್ನು ನಂಬಿಕೆಯುಳ್ಳವರೆಲ್ಲ ಅರ್ಹಂತರಾಗಲು ಶ್ರಮಣರಾಗಲು ಬುದ್ಧರಾಗಲು ಎಲ್ಲರೂ ಪ್ರಯತ್ನಿಸಬೇಕು. ಅದೇ ಈ ಧರ್ಮದ ಆದ್ಯ ಗುರಿ. ಅರ್ಹಂತ ಪದವಿಗೇರಲು ಮಾನವನು ತನಗಿರುವ ಹತ್ತು ಬಂಧನಗಳನ್ನು ಗೆದ್ದಿರಬೇಕು. ನಾನು ಅಥವಾ ನನ್ನದು ಎನ್ನುವ ಭ್ರಾಂತಿ

ಬೇಕೆಂದು ಎಚ್ಚರ ನೀಡಿದರು.

ಬುದ್ಧಿ ಬಲದಿಂದ ಮಾನವ, ಲೋಕ ಕಲ್ಯಾಣ ಕಾರ್ಯಗಳಲ್ಲಿ ತೊಡಗಬಹುದು ಅಥವಾ ಸ್ವಾರ್ಥಕ್ಕೆ ಬಲಿಯಾಗಿ ಲೋಕ ಕಂಟಕನಾಗಬಹುದು. ಸ್ವಾರ್ಥವು ಬುದ್ಧಿಶಕ್ತಿಯನ್ನು ವಿನಾಶಕಾರಿ ಪ್ರವೃತ್ತಿಯ ಕಡೆಗೆ ಎಳೆದೊಯ್ಯುತ್ತದೆ. ಆದುದರಿಂದ ಎಲ್ಲರಲ್ಲಿಯೂ ಮೂಲವಾದ ಆಸೆಯನ್ನೇ ನಿರ್ಮೂಲ ಮಾಡಿದರೆ ಅವರು ಲೋಕೋಪಕಾರಿಗಳಾಗುತ್ತಾರೆ. ಭವದ ದುಃಖವು ತಾನಾಗಿ ಪರಿಹಾರವಾಗುತ್ತದೆ ಎಂಬ ದಿವ್ಯ ಸಾಕ್ಷಾತ್ಕಾರವನ್ನು ಬುದ್ಧ ಭಗವಾನರು ಪಡೆದಿದ್ದರು. ಈ ಕೃತಿಯಲ್ಲಿ ಅವರ ಅನೇಕ ಸಂದೇಶಗಳು ಬಹು ಮುಖ್ಯವಾದ ಅಂದರೆ ಮಾನವ ಸಮಾಜದ ನೈತಿಕ ಮಾರ್ಗದ ಉನ್ನತಿಗೆ ಮುಖ್ಯವಾದ ಸಂಗತಿಗಳನ್ನು ಸಂಗ್ರಹಿಸಲಾಗಿದೆ. ಈ ಕೃತಿಯಲ್ಲಿ ಬರುವ ಸನ್ಮಾರ್ಗ ದರ್ಶನಗಳು ಯಾವುದೇ ಒಂದು ಜಾತಿ ಅಥವಾ ಪಂಥವನ್ನೇ ಕುರಿತು ಹೇಳಿದ ಸಂಗತಿಗಳಲ್ಲ. ಸಾರ್ವಜನಿಕವಾದ ಸಾರ್ವಕಾಲಿಕವಾದ ಸಾಧನಾ ಮಂತ್ರಗಳಾಗಿವೆ. ಇಲ್ಲಿ ತಾರ್ಕಿಕವಾದ ಯಾವುದೇ ರೀತಿಯ ಗೊಂದಲದ ಸಮಸ್ಯೆಗಳನ್ನು ಚರ್ಚಿಸಲು ಯತ್ನಿಸಿಲ್ಲ. ಆದಾಗ್ಯೂ ವಿಪುಲವಾದ ಸಾಹಿತ್ಯದಿಂದ ಕೂಡಿದ ಬೌದ್ಧ ಧರ್ಮದ ಮತ್ತು ದರ್ಶನದ ಮೂಲವಾದ ಮುಖ್ಯಾಂಶಗಳು ಈ ಪುಟ್ಟ ಕೃತಿಯಲ್ಲಿ ಪ್ರವರ್ತಿಸುವುದು ಕಂಡುಬರುತ್ತದೆ.

ಈ ಕೃತಿಯಲ್ಲಿ ಬರುವ ಅನೇಕ ಅಂಶಗಳು ಅಂದಿನ ಸಮಾಜದ ಸಾಮಾಜಿಕ ಸ್ಥಿತಿಯ ಚಾರಿತ್ರಿಕ ಪ್ರಸಂಗಗಳನ್ನು ರೂಪಿಸುತ್ತವೆ. ಹೋಮ ಯಜ್ಞ ಯಾಗಾದಿಗಳನ್ನು ಮಾಡುವುದರಿಂದ ಬರುವ ಫಲಕ್ಕಿಂತಲೂ ಪರೋಪಕಾರ ಮಾಡುವುದರಿಂದ ಅಹಿಂಸಾ ಪ್ರವೃತ್ತಿಯಿಂದ ಬರುವ ಫಲ ಮಿಗಿಲಾದುದೆಂದು ದೀನದಲಿತ ಸಮಾಜವನ್ನು ಎರಡೂವರೆ ಸಹಸ್ರ ವರ್ಷಗಳ ಹಿಂದೆಯೇ ಎಚ್ಚರಿಸಿರುವುದು ಅಂದಿನ ಸಾಮಾಜಿಕವಾದ ಮಹಾ ಕ್ರಾಂತಿಯೆನ್ನಬಹುದು. ಮನುಷ್ಯರು ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕೆಂದು ಎಚ್ಚರಿಸಿರುವ ಸಂಗತಿ ಗಮನಾರ್ಹವಾಗಿದೆ. ಈ ಉಪದೇಶಗಳನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ಪರಿಶೀಲಿಸಿದರೆ ಉಪನಿಷತ್ತುಗಳಲ್ಲಿ ಹೇಳಿರುವ ಅಂಶಗಳನ್ನೇ ಹೇಳಿದೆಯೆಂಬುದು ಖಚಿತವಾಗುತ್ತದೆ. (1) ಸರ್ವರಿಗೂ ಧರ್ಮ ಜ್ಞಾನದಲ್ಲಿ ಆಸಕ್ತಿಯನ್ನು ಕೆರಳಿಸಿದ ಕ್ರಾಂತಿಕಾರ್ಯವನ್ನು ಬುದ್ಧ ಭಗವಾನರು ಮಾಡಿದ್ದಾರೆ. ಆಸ್ತಿಪಾಸ್ತಿಗಳಲ್ಲಿ ಜನರಿಗಿದ್ದ ಮೋಹವನ್ನು ಬಿಡಿಸಿ ಸಮಾಜವಾದ ಸ್ಥಾಪನೆಯ ನಾಂದಿಯನ್ನು ಹಾಡಿರುವುದು ಇಲ್ಲಿ ವ್ಯಕ್ತವಾಗುತ್ತದೆ.

ಈ ಒಂದು ಪುಟ್ಟ ಕೃತಿಯ ಸಂದೇಶದ ಆಧಾರದ ಮೇಲೆ ಸಮಗ್ರ ಬೌದ್ಧ ಸಿದ್ಧಾಂತವನ್ನೇ ನಿರೂಪಿಸಲು ಸಾಧ್ಯವಿದೆ.

(1) ಪ್ರಾಚೀನ ಸಾಹಿತ್ಯ : ಶ್ರೀ ಟಿ. ಎಸ್. ವೆಂಕಣ್ಣಯ್ಯ ಪುಟ 91

ಆದುದರಿಂದ ಈ ಕೃತಿಯು ಬೌದ್ಧ ಧರ್ಮಾವಲಂಬಿಗಳ ನಾಡಿನಲ್ಲಿ ಪವಿತ್ರ ಕೃತಿಯಾಗಿ ಪರಿಗಣಿಸಲ್ಪಟ್ಟಿದೆ. ಅನೇಕ ಯೂ ವಿಶ್ವ ಧರ್ಮಾಭಿಮಾನಿಗಳು ಇಲ್ಲಿನ ಸಂದೇಶಗಳಿಗೆ ಮಾರು ಹೋಗಿದ್ದಾರೆ. ಹೆಚ್ಚು ತಿಳಿಯಬಯಸುವವರು ಮೂಲ ಕೃತಿಯನ್ನು ಓದಬೇಕು. ಇಲ್ಲಿ ಅದರ ಸಾರವನ್ನು ಮಾತ್ರ ನಿರೂಪಿಸಿದೆ. ಆದರೂ ಕೃತಿಯ ಹಿರಿಮೆಯನ್ನು ಅರಿಯಲು ಇದೊಂದು ಕೈಗನ್ನಡಿಯಾಗಬಹುದೆಂದು ಆಶಿಸಿದೆ. "ನಮ್ಮ ದೇಶದಲ್ಲಿ ಬಹುಕಾಲಕ್ಕೆ ಅನಾದರಕ್ಕೆ ಪ್ರಾಪ್ತವಾಗಿರುವ ಬೌದ್ಧ ಶಾಸ್ತ್ರಗಳನ್ನು ಉದ್ಧಾರ ಮಾಡುವುದರಲ್ಲಿ ಯುರೋಪ್ ಪಂಡಿತರು ಪ್ರವೃತ್ತರಾಗಿರುತ್ತಾರೆ. ನಾವು ಅವರ ರೀತಿಯನ್ನು ಹಿಂಬಾಲಿಸಬೇಕೆಂಬ ನಿರೀಕ್ಷಣೆಯಲ್ಲಿ ಕುಳಿತಿದ್ದೇವೆ. ಇದೇ ನಮ್ಮ ದೇಶದ ಅತ್ಯಂತ ದಾರುಣವಾದ ಕಾರಣ. ದೇಶದಲ್ಲಿ ನಮಗಿರುವ ಪ್ರೀತಿಯು ಕೇವಲ ಸರ್ಕಾರದ ಬಾಗಿಲಲ್ಲಿ ಭಿಕ್ಷೆ ಮಾಡುವ ಕಾರ್ಯದಲ್ಲಿಯೇ ನಿಂತು ಹೋಗಿದೆ, ಅದು ಮತ್ತಾವ ಕಡೆಗೂ ಹೋಗುವಂತಿಲ್ಲ. ಈ ದೇಶಕ್ಕೆಲ್ಲಾ ಐದು ಜನಗಳಾದರೂ ಬೌದ್ಧ ಶಾಸ್ತ್ರವನ್ನು ಉದ್ಧಾರ ಮಾಡುವುದನ್ನೆ ಅಜೀವನ ವ್ರತವನ್ನಾಗಿ ಗ್ರಹಣ ಮಾಡಲಾರರೆ ? ಈ ಬೌದ್ಧ ಶಾಸ್ತ್ರದ ಪರಿಚಯವಿಲ್ಲದುದರಿಂದ ಭಾರತ ಖಂಡದ ಸಮಸ್ತ ಇತಿಹಾಸವೂ ಕುರುಡಾಗಿದೆ ಎಂಬುದನ್ನಾದರೂ ಮನಸ್ಸಿನಲ್ಲಿಟ್ಟುಕೊಂಡು ದೇಶದ ಜನರಲ್ಲಿ ಕೆಲವು ತರುಣರ ಯೌವನದ ಉತ್ಸಾಹವಾದರೂ ಈ

ದಾರಿಯಲ್ಲಿ ಹೋಗುವುದಿಲ್ಲವೆ" (1) ಎಂದು ವಿಶ್ವ ಕವಿ ರವೀಂದ್ರನಾಥ ಠಾಕೂರರು ಕಳಕಳಿಯಿಂದ ಹೇಳಿದ ಮಾತು ಇಂದಿಗೂ ನಮ್ಮ ಭಾವನೆಯನ್ನು ಕೆರಳಿಸುವಂತಿದೆ, ಆದುದರಿಂದ ಈ ಪುಟ್ಟ ಕೃತಿ ಉತ್ಸಾಹಿ ಯುವಕರಲ್ಲಿ ಆಸಕ್ತಿಯನ್ನು ಕೆರಳಿಸುವುದಕ್ಕಾಗಿ ಅರ್ಪಿಸಿದ ಪುಟ್ಟ ಕಾಣಿಕೆಯಾಗಿದೆ.

---

(1) ಪ್ರಾಚೀನ ಸಾಹಿತ್ಯ : ಶ್ರೀ ಟಿ. ಎಸ್. ವೆಂಕಣ್ಣಯ್ಯ, ಪುಟ 102.